ಅಥವಾ

# ಪತಿವ್ರತಾ ಪ್ರಭಾವ.





**1930**

*Price 8 As.* ಬೆಲೆ ೮ ಆಣೆ.



ಶ್ರೀ ವಾಸುದೇವಾಯ ನಮಃ

# ಸತೀಸಾವಿತ್ರೀಮಹಾತ್ಮ್ಯೆ

ಅಥವಾ

# ಪತಿವ್ರತಾ ಪ್ರಭಾವ.

ಎಂಬ ಈ ಪದ್ಯಗ್ರಂಥವು

ಕವಿಕಿಂಕರ

ರಾಘವೇಂದ್ರ ಕಲ್ಲೋ ತೊರವೆ ಇವರಿಂದ
ವಿರಚಿತವಾದುದು.

[ ಪ್ರಥಮ ಮುದ್ರಣ ೨೦೦೦ ಪ್ರತಿಗಳು. ]



ಕ್ರಿ. ಶ. ಶಾ. ಶ.
೧೯೩೦ ] ಬೆಲೆ ೮ ಆಣೆ [ ೧೮೫೨,



## -: ಅರ್ಪಣ ಪತ್ರಿಕೆ. :-

ಈ ಕಾವ್ಯವನ್ನು ವಿರಚಿಸಲು ಸನ್ಮತಿಯನ್ನಿತ್ತು ಪೂರ್ತಿಗೊಳಿಸಿದ




## ಗದುಗಿನ ಶ್ರೀ ವೀರನಾರಾಯಣನಿಗೆ

ಈ ಗ್ರಂಥ ಪುಷ್ಪವನ್ನು ಅನನ್ಯ ಭಾವದಿಂದ ಸಮರ್ಪಿಸವೆನು

# ಪ್ರಸ್ತಾವನೆ.

**ಶ್ರೀ ವೀರನಾರಾಯಣನ** ಕೃಪಾ ವಿಶೇಷದಿಂದ, ವಿರಚಿಸಿದ ಈ ಸತಿಶಿರೋಮಣಿಯು ಚರಿತ್ರವೇನೂ ಕೇವಲ ಅಪರಿಚಿತವಾದದ್ದಲ್ಲ. ಇದೇ ಕಥೆಯನ್ನು ಅನೇಕ ನಾಟಕ ಕರ್ತೃಗಳೂ, ಗ್ರಂಥ ಕರ್ತೃಗಳೂ, ವರ್ಣಿಸಿದ್ದನ್ನು ವಿಚಾರಿಸಿದರೆ, ಈ ಸಾಧ್ವಿಯು ಅಕಲಂಕ ಪತಿಭಕ್ತಿಯೂ ಧೈರ್ಯ ಸಾಹಸಗಳೂ, ಅಗಮ್ಯವಾಗಿ ತೋರುವವು.“ಇಷ್ಟು ಜನರಿಂದ ವರ್ಣಿತವಾದ ಚರಿತ್ರವನ್ನು ಅಲ್ಪಜ್ಞನಾದ ನಾನು ಏತಕ್ಕೆ ವರ್ಣಿಸಬೇಕು.” ಎಂದು ಬರೆಯುವಾಗ ಒಂದೆರಡುಸಲ ಲೆಕ್ಕಣಿಕೆಯು ತಟಸ್ಥವಾದರೂ, **ಗದುಗಿನ ಶ್ರೀ ವೀರನಾರಾಯಣನ** ಕೃಪೆಯಿಂದಲೋ, ಅಥವಾ ಕಾವ್ಯನಾಯಿಕೆಯ ಕರ್ತೃತ್ವ ಶಕ್ತಿಯಿಂದಲೋ, “ಬಹುರತ್ನಾವಸುಂಧರಾ” “ಅಷ್ಟು ಜನರು ವರ್ಣಿಸಿದ ಮಾತ್ರಕ್ಕೆ ಶಬ್ದಸಾಗರವೇನೂ ಬರಿದಾಗಲಿಲ್ಲಾ. ಆ ಮಹಾಮಹಿಮಳ ಯಶಶ್ಚಂದ್ರಿಕೆಯ ಮೇರೆಯು ಕಂಡಂತಾಗಲಿಲ್ಲ” ಎಂದು ಮನಸ್ಸಿಗೆ ಸಮಾಧಾನವನ್ನು ಹಚ್ಚಿಕೊಂಡು, ಪುನಃ ಬರೆಯಲು ಪ್ರಾರಂಭಿಸಿ ಕೊನೆಗಾಣಿಸಿದೆನು.

ಕಥಾನಾಯಿಕೆಯಾದ **ಸತಿಸಾವಿತ್ರಿ**ಯ ಜನನವು ಇಂತಿಷ್ಟುದಿವಸಗಳ ಪೂರ್ವದಲ್ಲಿ ಆಗಿದೆಯೆಂದು ಇನ್ನೂ ನಿಷ್ಕರ್ಷವಾಗದಿದ್ದರೂ, ಸತ್ಯಯುಗ (ಕೃತಯುಗ) ದಲ್ಲಿ ಈಕೆಯ ತಂದೆಯಾದ ಅಶ್ವಪತಿರಾಯನು, ಈಗ ಪಂಜಾಬವೆಂದು ಹೆಸರುಗೊಂಡ ಮದ್ರದೇಶದಲ್ಲಿ ರಾಜ್ಯವಾಳಿದನೆಂದು, ಶ್ರೀ ಕುರಡಿಯವರ “**ಸತ್ಯವಾನ ಸಾವಿತ್ರಿ**” ಎಂಬ ಗದ್ಯ ಗ್ರಂಥದಿಂದ ತಿಳಿದು ಬರುತ್ತದೆ. ಇದೇ ಕಥೆಯು ನಾರದರಿಂದ ಧರ್ಮರಾಯನಿಗೆ ಹೇಳಲ್ಪಟ್ಟಿತೆಂದು ಮಹಾಭಾರತಕಾರರು ತಮ್ಮ ಕೃತಿಯಲ್ಲಿ ವ್ಯಕ್ತಪಡಿಸಿರುವರು. ಶ್ರೀ ಶಂಕರನು ಬ್ರಹ್ಮಪುತ್ರನಾದ **ಸನತ್ಕುಮಾರನಿಗೆ** ಈ ಕಥೆಯನ್ನು ಬೋಧಿಸಿದನೆಂದು, ಸ್ಕಂದ ಪುರಾಣಿಕರು ಉಲ್ಲೇಖಿಸಿದ್ದಾರೆ. ಇವೆಲ್ಲವುಗಳ ಮೇಲಿಂದ ವಿಚಾರಿಸಿದರೆ, ಶ್ರೀ ಕುರಡಿಯವರು **ಸಾವಿತ್ರಿ**ಯ ಕಾಲವು ಸತ್ಯಯುಗವೆಂದು ಅಂದದ್ದು, ಯಥಾರ್ಥವೆಂದೇ ತಿಳಿಯುತ್ತದೆ.

ಶ್ರವಣ, ಪಠಣಮಾತ್ರದಿಂದ ಸುಖಪ್ರದವಾದ ಈ ಮಹಾಮಹಿಮಳ ಚರಿತ್ರೆಯು ಸ್ಕಂದ ಪುರಾಣದಲ್ಲಿ ಗೀರ್ವಾಣ ಭಾಷೆಯಿಂದ ವರ್ಣಿಸಲ್ಪಟ್ಟಿದ್ದು, ಅದನ್ನು ನಮ್ಮ ಕನ್ನಡ ಬಂಧು ಭಗಿನಿಯರು ಸುಲಭವಾಗಿ ತಿಳಿದುಕೊಳ್ಳಲೆಂಬ ಸದುದ್ದೇಶದಿಂದ, ಭಾಮಿನೀ ಷಟ್ಪದಿಯಲ್ಲಿ ತಿಳಿಗನ್ನಡದಿಂದ ಹನ್ನೊಂದು ಅಧ್ಯಾಯವಾಗಿ ವರ್ಣಿಸಿದ್ದೇನೆ. ಈ ಸಾಧ್ವಿಯು ತನ್ನಪತಿಯ ಸಲುವಾಗಿತೋರಿಸಿದ ನಿಸ್ಸೀಮ ಭಕ್ತಿಯನ್ನೂ, ಮನಸ್ಸಾಕ್ಷಿಯಾಗಿ ವರ್ತಿಸಿದ ವ್ರತನೇಮುಗಳನ್ನೂ, ಕಷ್ಟಕಾಲದಲ್ಲಿಯಾದರೂ ವ್ಯಕ್ತಪಡಿಸಿದ ಮನಶ್ಯಾಂತಿಯನ್ನೂ, ಸ್ತ್ರೀ ಸಮಾಜವು ಗ್ರಹಿಸುವಂತಿದೆ.

ಕಷ್ಟಗಳು ಒಂದರಹಿಂದೊಂದು ಬರಹತ್ತಿದವೆಂದರೆ ಅವುಗಳ ನಿವಾರಣೋಪಾಯವನ್ನು ಮಾಡದೆ, ದೈವ ದೈವವೆಂದುಬಡಬಡಿಸುತ್ತ ಕರ್ತವ್ಯಪರಾಙ್ಮುಖರಾಗುವ ಮನುಷ್ಯರನ್ನು ಕಾಣುವದು ಅಪರೂಪವಲ್ಲ. ಇಂಥವರು, ಸಹಿಸಲಸಾಧ್ಯವಾದ ಕಷ್ಟದಲ್ಲಿ ಪತಿಸೇವೆ, ವ್ರತೋಪಾಸಗಳನ್ನು ಬಿಡದೆ, ತಿಳಿದು ಬಂದ ಮುಂದಿನ ತನ್ನ ದುರ್ದೈವವನ್ನು, ಸತ್ಕರ್ಮ, ಧರ್ಮಾಚರಣೆಗಳಿಂದ ನಾಶಗೊಳಿಸಿದ ಈ **ಸಾವಿತ್ರಿ**ಯ ಚರಿತ್ರೆಯನ್ನುಉದಾಹರಣವಾಗಿಟ್ಟುಕೊಂಡು, ಈ ಸಂಸಾರದಲ್ಲಿ ಎಷ್ಟು ಎಡರುಗಳು ಬಂದರೂ, ಸ್ವಧರ್ಮವನ್ನು ಬಿಡದೆ ವರ್ತಿಸಬೇಕಾಗಿ ಸವಿನಯ ಪ್ರಾರ್ಥನೆಯಿದೆ.

ಶ್ರೀ ವೀರನಾರಾಯಣನ ವಾಸಸ್ಥಾನವಾದ ಗದುಗಿನಲ್ಲಿ ಈ ಕಾವ್ಯವನ್ನು ವಿರಚಿಸಲು ಪ್ರಾರಂಭಿಸಿದೆನೆಂದು ತಿಳಿಸಲು ಸಂತೋಷವಾಗುತ್ತದೆ. ಆಗ್ಗೆ ನನಗೆ ಆಶ್ರಯವಿತ್ತು ಈ ಕೃತಿಯಲ್ಲಿ ಅನೇಕ ತಿದ್ದುಪಡಿಗಳನ್ನು ಮಾಡಿದ ಶ್ರೀ ಹುಯಿಲಗೋಳ **ಅಚ್ಯುತ**ರಾಯರಿಗೆ, ನಾನು ಅತ್ಯಂತ ಕೃತಜ್ಞನಾಗಿರುವೆನು. ಈ ಕಾವ್ಯವನ್ನು ರಚಿಸುವದು ಸಮೀಪಿಸಿದಂತೆ, ಮುಂದೆ ಪ್ರಸಿದ್ಧಗೊಳಿಸುವ (ಮುದ್ರಿಸುವ) ಆಲೋಚನೆಯು ನನ್ನಲ್ಲಿ ಉದ್ಭವಿಸತೊಡಗಿತು. ಆದರೆ ಆ ಆಶಾಂಕುರವು, ನನ್ನ ದೈನ್ಯಾವಸ್ಥೆಯ ತಾಪದಿಂದ ಮೇಲಿಂದ ಮೇಲೆ ಬಾಡುತ್ತಲೂ ಚಿಗಿಯುತ್ತಲೂ, ಇರುವಾಗ್ಗೆ, "ಕನ್ನಡಿಗ" ವರ್ತಮಾನಪತ್ರದ ಸಂಪಾದಕರಾದ ಶ್ರೀ. ಮಂಗಳವೇಢೆ **ಶ್ರೀನಿವಾಸ**ರಾಯರು ಅಕಸ್ಮಾತ್ತಾಗಿ ಶ್ರೀ. **ಅಚ್ಯುತ**ರಾಯರ ಮನೆಗೆ ಆಗಮಿಸಿದರು. ಆಗ ಅವರು ನನ್ನನ್ನು ಕುರಿತು "ನೀನು ಮುದ್ರಣಾಲಯದ ಕೆಲಸವನ್ನು ಕಲಿತರೆ ಸುಖವಾಗುವದೆಂದು" ಬೋಧಿಸಿದರು. ಅವರ ಅಭಿಪ್ರಾಯದ ಮೇರೆಗೆ ಮುದ್ರಿಸುವ ಎಲ್ಲ ಕೆಲಸಗಳನ್ನೂ ತಕ್ಕ ಮಟ್ಟಿಗೆ ಅರಿತುಕೊಂಡು, ೧-೨ ವರುಷಗಳವರೆಗೆ "ಕನ್ನಡಿಗ"ನ ಸೇವೆಯನ್ನು ಮನಮುಟ್ಟಿ ಮಾಡಿದೆನು. ಈ ಅವಧಿಯಲ್ಲಿ ನನ್ನ ಕಾವ್ಯರಚನೆಯು ಸಲ್ಪಮಾತ್ರ ಉಳಿದಿತ್ತು. ಮುಂದೆ ಕಾಲಕರ್ಮ ಸಂಯೋಗದಿಂದ ಇಲಕಲ್ಲಿನಲ್ಲಿ ಹೊಸದಾಗಿ ಮುದ್ರಣಾಲಯವು ತಲೆದೋರಿ ಅಲ್ಲಿಯ ಜನರ ಆಮಂತ್ರಣದ ಮೇರೆಗೆ **ಶ್ರೀನಿವಾಸ**ರಾಯರ ಅಪ್ಪಣೆ ಪಡೆದು, ಅದರ ಸ್ಥಾಪನೆಯ ಕಾಲಕ್ಕೆ ಆಗಮಿಸಿ, ಚಾಲಕತ್ವವನ್ನು ಕೈಕೊಂಡೆನು. ಮುಂದೆ ತುಸುದಿವಸಗಳಲ್ಲಿ ಈ ನನ್ನ ಕಾವ್ಯವು ಪೂರ್ತಿಯಾಗಲು, ನಾನಿದ್ದ **ಶ್ರೀ ಬನಶಂಕರೀ**ಮುದ್ರಣಾಲಯದ ಒಡೆಯರಿಗೆ- "ಎಲ್ಲರಂತೆ ಯೋಗ್ಯ ಬೆಲೆಯನ್ನು ಕೊಟ್ಟು ಮುದ್ರಿಸಲು ಬಡವನಾದ ನನಗೆ ಶಕ್ಯವಿಲ್ಲದ್ದರಿಂದ, ನಿಮ್ಮ ಮುದ್ರಣಾಲಯದ ದಿನದ ಕೆಲಸವು ಮುಗಿದಮೇಲೆ ಈ ಪುಸ್ತಕದ ಕೆಲಸವನ್ನು ಮಾಡಿಕೊಳ್ಳಲು ನನಗೆ ಅಪ್ಪಣೆಯಾಗಬೇಕೆಂ"ದು ಬೇಡಲು ಕರುಣಾ ಹೃದಯದವರಾದ ನನ್ನ ಆಶ್ರಯದಾತರು ಒಪ್ಪಿ, ಅದರಂತೆ ನನಗೆ ಅನುಕೂಲ ಮಾಡಿಕೊಟ್ಟು ಕಾಗದಗಳಿಗಾದರೂ ಧನಸಹಾಯವನ್ನು ಮಾಡಿದರು. ಮುಂದೆ ಪರಮಾತ್ಮನಿಗೆ, ರಾತ್ರಿಯಲ್ಲಿ **ಸತಿಸಾವಿತ್ರಿ**ಯ ಸೇವೆಯನ್ನೂ, ಹಗಲಿನಲ್ಲಿ **ಶ್ರೀ ಬನಶಂಕರಿ**ಯ (ಆಶ್ರಯದಾತರ) ಸೇವೆಯನ್ನೂ, ಮಾಡಲು ಶಕ್ತಿಯನ್ನು ಕೊಡೆಂದು ಪ್ರಾರ್ಥಿಸಿ ಮುದ್ರಿಸಲು ಪ್ರಾರಂಭಿಸಿದವನು, ಆರು ತಿಂಗಳ ಅವಧಿಯಲ್ಲಿ ಇದನ್ನು ಪೂರ್ತಿಗೊಳಿಸಿದೆನು. ಈ ಮೇರೆಗೆ, ಬಡವನಾದ ನನಗೆ ಶುಲಭವಾಗುವಂತೆ ಮುದ್ರಿಸಿ ಕೊಟ್ಟ, ಶ್ರೀ ಬನಶಂಕರೀ ಮುದ್ರಣಾಲಯದ ಒಡೆಯರಿಗೆ ನಾನು ಅತ್ಯಂತ ಕೃತಜ್ಞನಿರುವೆನಲ್ಲದ, ದೀರ್ಘಕಾಲ ಅವರ ಸೇವೆಯನ್ನು ಅನನ್ಯ ಭಾವದಿಂದ ಮಾಡಲು ಪರಮಾತ್ಮನು ನನಗೆ ಬುದ್ಧಿಯನ್ನು ಕೊಡಲೆಂದು ಇಚ್ಛಿಸುತ್ತೇನೆ.

ನನ್ನ ಈ ಕಾವ್ಯದಲ್ಲಿಯಅನೇಕ ತಪ್ಪುಗಳನ್ನು ಬಹು ಪ್ರಯಾಸದಿಂದ ಹುಡುಕಿ ತಿದ್ದಿದ, **ಕೈವಲ್ಯ ಕಲ್ಪವಲ್ಲರಿಯ ಟೀಕಾಕಾರರಾದ ಶ್ರೀ. ಮಾನಸಪ್ಪಾ ಸಾಲತವಾಡ** ಇವರಿಗೆ ನಾನು ಅತ್ಯಂತ ಋಣಿ ಯಾಗಿರುವೆನು.

ಈ ಮೇರೆಗೆ ಅನೇಕ ಮಹನೀಯರಿಂದ ತನು ಮನ ಧನಸಹಾಯವನ್ನು ತೆಗೆದುಕೊಂಡು ಪ್ರಸಿದ್ಧ ಪಡಿಸಿದ ಈ ನನ್ನ ಗ್ರಂಥಕ್ಕೆ ಎಲ್ಲ ಕನ್ನಡ ಬಂಧು ಭಗಿನಿಯರು ಆಶ್ರಯ ಕೊಡಬೇಕಾಗಿ ಪ್ರಾರ್ಥನೆಯದೆ.

**ಕವಿಕಿಂಕರ.**

## ಶ್ರೀ ರಸ್ತು.

# ಅಭಿಪ್ರಾಯವು.

ಅಯ್ಯಾ **ರಾಘವಾಂಕರೇ,** ನೀವು ರಚಿಸಿರುವ **ಸತ್ಯವಾನ ಸಾವಿತ್ರಿಯರ** ಚರಿತ್ರವನ್ನು ನಾನು ಮೊದಲಿನಿಂದ ಕಡೆಯವರೆಗೆ ನೋಡಿದೆನು. ಅದು ಭಾಮಿನಿ ಷಟ್ಪದಿ ರೂಪವಾದ ಮೂರುನೂರಾವಃರು ಪದ್ಯಗಳಿಂದ ಕೂಡಿ ಹನ್ನೊಂದು ಭಾಗವಾಗಿ ವಿಭಾಗಿಸಿರುವದು. ಸಧ್ಯದ ಸ್ಥಿತಿಯನ್ನು ವಿಚಾರಿಸಲುಃ ಗದ್ಯ ಗ್ರಂಥಗಳೇ ಪ್ರಬಲವಾಗುತ್ತಿರುವ ಕಾಲದಲ್ಲಿ, ತಾವು ಪದ್ಯ ಗ್ರಂಥವನ್ನು ಬರೆದದ್ದು ಗೌರವದ ಸಂಗತಿಯು.

ಗ್ರಂಥವು ಚಿಕ್ಕದಾದರೂ ಇದರಲ್ಲಿ ಕಂಡುಬರುವ ಪತಿವ್ರತಾ ಮಹತ್ವ, ಗಂಡನ ಮಾತನ್ನನುಸರಿಸಿ ನಡೆಯುವಿಕೆ, ಮನಸ್ಸಿನಲ್ಲಿ ಒಮ್ಮೆ ಧರ್ಮ ಸಮ್ಮತವಾದ ಮಾತನ್ನು ಧೃಡೀಕರಿಸಿದ ಬಳಿಕ ಪುನಃಅದನ್ನು ಅಲ್ಲಗಳೆಯದಿರುವಿಕೆ, ಪತಿವ್ರತಾ ಮಹಾತ್ಮ್ಯಯಿಂದ ಪ್ರತ್ಯಕ್ಷಯಮ ದರ್ಶನದಿಂದಲೂ ಭಯವಿಲ್ಲದಿರುವಿಕೆ, ಯಃಮನ ವರದಿಂದ ಗತಾಸುವಾದ ಗಂಡನ ಪ್ರಾಣವನ್ನುಬರಿಸುವಿಕೆ ಮುಂತಾದ ಅನೇಕ ಸದ್ಗುಣಗಳು ಕೂಡಿರುವದರಿಂದ ಇದು ಸರ್ವರಿಂದಲೂ ಮಾನ್ಯವಾಗುವದೆಂಬದಾಗಿ ನಾನು ನೆನೆಸುವೆನು.

**ಮಾನಪ್ಪಾ ಅನ್ವಣ್ಣಪ್ಪಾ ನಾಲತವಾಡ**
**ವಿಶ್ವ ಬ್ರಾಹ್ಮಣ ಇಲಕಲ್ಲ**

**-: ಈ ಕಾವ್ಯದಲ್ಲಿಯ ಸಂಜ್ಞಾರ್ಥಗಳು :-**

* ಈ ಚಿನ್ನವು ಶಿಥಿಲೋಚ್ಚಾರವನ್ನು ಸೂಚಿಸುತ್ತದೆ.

– ಈ ಚಿನ್ನವು ತಾನಿದ್ದ ಸ್ಥಳದಲ್ಲಿ ನಿಲ್ಲಬಾರದಾಗಿ ಸೂಚಿಸುತ್ತದೆ.

— ಈ ಚಿನ್ನವು ಅಂದದ್ದೇನಂದರೆ ಎಂದು ತಿಳಿಸುತ್ತದೆ.

# ಶುದ್ಧಾಶುದ್ಧ ಪತ್ರಿಕೆ.

| ಪುಟ. | ಪಂಙ್ತಿ | ಅಶುದ್ಧ. | ಶುದ್ಧ. |
|---|---|---|---|
| ೨ | ೩ | ವಿಖ್ಮಾತೆ | ವಿಖ್ಯಾತೆ. |
| ,, | ೯ | ಮಮತೆಯಲೆ | ಮಮತೆಯಲಿ |
| ,, | ೧೬ | ಭೂಧರವಾಸ | ಪ್ರಮಥಗಣೇಶ |
| ೩ | ೫ | ವೀರಳ | ವೀರರ |
| ,, | ೧೬ | ದೊಲೆ | ದೊಲಿ |
| ೪ | ೧೫ | ಉಸುರುವೆನು | ಉಸಿರುವೆನು |
| ೫ | ೧೪ | ಉಸಿರೊಳಗೆ | ಉಸುರೊಳಗೆ |
| ೯ | ೨ | ವಿಹುದೆ | ವಿಹದೆ |
| ೧೦ | ೧೭ | ಬಹುವಿವಿ | ಬಹುವಿಧ |
| ೧೧ | ೧೫ | ವೈಮರೆನಿರುವ | ಮೈಮರೆದಿರುವ |
| ೧೨ | ೫ | ಉತ್ತಮರೊಳತ್ಯುತ್ತಮಳ್ಕೆ | ಉತ್ತಮರೊಳುತ್ತಮಳೆನಿಪ, |
| ,, | ೨೧ | ಪಡೆಸನ್ನಾಹ | ಬಲಸನ್ನಾಹ |
| ೧೫ | ೨೦ | ನಿವಗರ್ಪಿಸಿದೆ | ನಿನಗರ್ಪಿಸಿದೆ |
| ೧೬ | ೩ | ಮಿಸುಕದಲೆ | ಮಿಸುಕದೊಲು |
| ೧೭ | ೧೮ | ಗೊನಿಕರ | ಗೋನಿಕರ |
| ೨೨ | ೧೫ | ಕೃಪೆಯಿಲು ಯೆನಗೆ | ಕೃಪೆಯಿರಲ್ಕೆನಗೆ |
| ,, | ೧೭ | ಜನನಿಯುಃಎಂದು | ಜನನಿಯುಳಿಂದು |
| ೨೮ | ೧೯ | ಪರರೋಳು | ಪರರೊಳು |
| ೩೩ | ೫ | ನೂಪೂರ | ನೂಪುರ |
| ೩೬ | ೧೬ | ಹಿವವಾಹಿತವ | ಹಿತವಹಿತವನು |
| ,, | ೨೨ | ಸಡ್ಗುಣೆ | ಸದ್ಗುಣೆ |
| ೪೧ | ೬ | ಆತ್ಮಜಿ | ಆತ್ಮಜೆಗೆ |
| ೪೯ | ೧೧ | ಸಂಪ್ರಿತಿಯಿಂ | ಸಂಪ್ರೀತಿಯಿಂ |
| ೫೬ | ೨೦ | ವೃತೆಯರೀ | ವ್ರತೆಯರೀ |
| ೬೯ | ೪ | ಸಿಖಾಮಣಿ | ಶಿಖಾಮಣಿ |
| ೭೧ | ೧೫ | ನುಡವೆನು | ನುಡಿವೆನು |
| ೭೨ | ೧೨ | ಅಪ್ಪದು | ಅಪ್ಪುದು |
| ,, | ೨೦ | ದವನೀತ | ನವನೀತ |



ಶ್ರೀ ವಾಸುದೇವಾಯ ನಮಃ

# ಶ್ರೀ ಸತಿ ಸಾವಿತ್ರಿ ಮಹಾತ್ಮೆ

## ಪ್ರಾರಂಭ.

## -: ಪ್ರಥಮೋಧ್ಯಾಯ :-

### ಪೀಠಿಕೆ.

ಭಾ. ಷ.

ಶ್ರೀ ಗಣಪತಿಯೆ ನುತಿಪ ಜನರಿಗೆ |
ಬೇಗದಿಂದಿಷ್ಟಾರ್ಥ ವೀಯುವ |
ನಾಗಿರುವೆ, ಮೇಣಾದಿ ಪೂಜ್ಯನು ಜಗಕೆ ನೀನೆಂದು ||
ಬಾಗುವೆನು ಮತ್ಕೃತಿಯ ಪೂರ್ವದಿ |
ಸಾಗಿಸುತ ನಿರ್ವಿಘ್ನದಿಂ, ಶರ– |
ಣಾಗತನ ಕೈವಿಡಿದು ಕೊಡು ಎನಗಿಷ್ಟ ಸಂಪದವ ||೧||

ವಾಣಿ ವೀಣಾಪಾಣಿ, ಪನ್ನಗ |
ವೇಣಿ ಸತಿಕುಲ ಜಾಣೆ, ಬೊಮ್ಮನ |
ರಾಣಿ ಗಾನ ಪ್ರವೀಣೆ ಸುಗುಣಶ್ರೇಣಿ ಕಲ್ಯಾಣಿ ||

ಕಾಣೆನೌ ಭೂತಲದಿ ಬುಧ ಸಿ- |
ರ್ವಾಣರೊಳು ನಿನಗಧಿಕ ದೇವರ |
ಮಾಣಿಸೌ ಮನ್ಮಂದತೆಯ ಭೋ ಮಾತೆ ವಿಖ್ಯಾತೆ. || ೨ ||

ಶ್ರೀಲಕುಮಿ ಭೂರಮಣ ಸಜ್ಜನ |
ಪಾಲ, ಗಾನವಿಲೋಲ, ಸದ್ಗುಣ- |
ಜಾಲ ವರ ಗೋಪಾಲ, ದುರ್ಜನ ಕಾಲ, ಮಾಲೋಲ ||
ನೀಲ-ಮೇಘ-ಶ್ಯಾಮ ಸುಂದರ |
ಬಾಲ ನಿರುಪಮ ಲೀಲ ಪರಮ ವಿ- |
ಶಾಲ, ಸುಮನಸ ವಂದ್ಯ, ರಕ್ಷಿಪುದೆನ್ನ ಮಮತೆಯಲಿ || ೩ ||

ಸಾಗರೋದ್ಭವೆಯಾಗಿ ಭೋಗ ವಿ- |
ರಾಗದಲಿ *ತ್ರಿಜಗಾಧಿಪತಿಯಹ |
ನಾಗ-ಶಯನನ ಕೈವಿಡಿದು, ವೈಕುಂಠದೊಳು ನೆಲಸಿ ||
ಬಾಗಿ ಬೇಡುವ ಭಕ್ತ ಗಣಕನು- |
ರಾಗದಿಂ ಫಲವಿತ್ತು ಪೊರೆಯುವ |
ನಾಗವೇಣಿಯೆ ಲಕುಮಿ ಕರುಣಿಪುದೀ ಮಹಾಕೃತಿಯ || ೪ ||

ಈಶ ಭೂಧರ ವಾಸ, ಸರ್ಪ ವಿ- |
ಭೂಷ, ನಿರುತೋಲ್ಲಾಸ ಗಿರಿಜಾ- |
ಧೀಶ ಭಕ್ತಾವಾಸ ನತಜನ ದಾಸ ಭೂತೇಶ ||
ವಾಸವಾನುತ ಸುರ ತರಂಗಿಣಿ- |
ಪೋಷ, ವರ ರಜತಾದ್ರಿವಾಸ ಸು- |
ರೇಶ ಶಂಭುವೆ ಶರಣು, ಕರುಣವ ತೋರು ಮತ್ಕೃತಿಗೆ || ೫ ||

---

(೧) ಇಷ್ಟಾರ್ಥವ-ಬಯಸಿದುದನ್ನು. ಸಂಪದ-ಪದವಿ. (೨) ಪನ್ನಗ-ಸರ್ಪ ಮಾಣಿಸು-ಕಳೆ. (೩) ಪಾಲ-ರಕ್ಷಿಸುವವ. ಜಾಲ-ಸಮೂಹ. ಮಾ-ಲಕ್ಷ್ಮಿ. ಸುಮನಸರು-ದೇವತೆಗಳು. (೪) ಸಾಗರ-ಸಮುದ್ರ. ಅಹ-ಆದ. ಅನುರಾಗ ಪ್ರೀತಿ. (೫) ಭೂಧರ-ಪರ್ವತ. ಸುರತರಂಗಿಣಿ-ದೇವಗಂಗಾ.

ಚಂಡಿ ಪರಮ *ಪ್ರಚಂಡಿ ವರಚಾ- ।
ಮುಂಡಿ ಶುಂಭ ನಿಶುಂಭ ಪರಮೋ- ।
ದ್ದಂಡ ರಾಕ್ಷಸ ಚಂಡುಗಳ ಚಂಡಾಡಿ ಖಂಡಿಸಿದ ॥
ಪುಂಡೆ ಬ್ರಂಹ್ಮಾಂಡದೊಳು ನಿನಗು- ।
ದ್ದಂಡ ವೀರಳ ಕಾಣೆ, ತವ ಕರ ।
ಪುಂಡರೀಕವ ನೀಡು ಮನ್ಮಸ್ತಕದಿ, ಗಿರಿಜಾತೆ ॥ ೬ ॥

ಹಿರಿಯರಿಟ್ಟರ್ಥವನು ಮಕ್ಕಳು ।
ಹರುಷದಿಂ ಭೋಗಿಸುತ ಮೆರೆಯುವ ।
ತೆರದಿ ಪೂರ್ವದೊಳಿದ್ದ ಕವಿವರರಿಟ್ಟ ವಾಗ್ಧನವ ॥
ಸರಸದಿಂ ಕೊಂಡವರ **ಋಣಿ**ಯಾ- ।
ಗಿರುವೆ ನಾನಲ್ಲದಲೆ ಪೌರುಷ ।
ವಿರುವದೇನಿದರೊಳಗೆನಗೆ, ಸಲೆ ತಿಳಿದು ನೋಡಲ್ಕೆ ॥ ೭ ॥

ಕನ್ನಡದ ಕೃತಿ ಎಂದುಪೇಕ್ಷಿಪ ।
ಘನ್ನ ಮಾನ್ಯರಿಗಂಜಿ ವಿನಯದೊ- ।
ಳಿನ್ನು ಪೇಳುವೆ ನಮ್ಮಹಿಮ ಕರ್ನಾಟಕಾಂಬಿಯಲಿ ॥
ಮುನ್ನಿನಿಂದೊಲೆ-ದಿರ್ದರಿಂಗಾ ।
ಭಿನ್ನುಡಿಯು ಸಮನಿಪುದೆ? ಲೋಕದಿ ।
ಕನ್ನಡಿಯ ಪೋಲ್ ಕಾಣುವದೆ ಮೊಗ ಜಲದಿ ನೋಡಿದೊಡೆ ॥ ೮ ॥

ಪಡೆದವಳ ಕ್ಷೀರಾಮೃತವನುರೆ ।
ಕುಡಿವ ಸಮಯಕ್ಕಮಿತ ಸುಖವನು ।
ಪಡೆಯುತಾ ನಂದಾಬ್ಧಿಯೊಳ್ ಸಲೆ ನಲಿವ ಬಾಲಕನ ॥

(೬) ತವ-ನಿನ್ನ. ಪುಂಡರೀಕ-ಕಮಲ. ಮಸ್ತಕ-ತಲೆ. (೭)ಅರ್ಥ-ದ್ರವ್ಯ, ವಾಗ್ಧನವ-ಶಬ್ದದ್ರವ್ಯವನ್ನು. ಪೌರುಷ-ಹೆಚ್ಚಳ. (೮)ಉಪೇಕ್ಷಿಪ-ಅಲ್ಲಗಳೆಯುವ. ಸಮನಿಪುದೆ-ಸರಿದೋರುವದೆ. (೯) ಪಡೆದವಳ-ತಾಯಿಯ. ಕ್ಷೀರ-ಹಾಲು. ಅಬ್ಧಿ-ಸಮುದ್ರ. ಸಲೆ-ಚನ್ನಾಗಿ.

ಹಿಡಿದು ತಂದತಿ ಬಲುಮೆಯಿಂದಲಿ।
ಕುಡಿಸಿದೊಡೆ ಮೇಲ್ವಾಲ ನವ ತಾ।
ಕುಡಿಯ ಬಲ್ಲನೆ? ಪ್ರೀತಿಯಿಂ ಮೇಣ್ ಸಬಲನಪ್ಪವನೆ? ॥ ೯ ॥

ಆವ ಭಾಷೆಯದೇನು, ಜೇರಿ।
ನ್ನಾವ ಲಿಪಿಯಾಗೇನು, ತಿಳಿಯ।
ಲ್ಲಾವ ದೇಶವದೇನು, ನೆರೆ ಸಜ್ಜ್ಞಾನ ಪಡೆಯಲ್ಕೆ ॥
ಸಾವಧಾನದಿ ಕಾಯ್ವ ಹರಿ ತಾ।
ಭಾವವೀಕ್ಷಿಸಿ ಕೊಡುವ ನಾ ಸ-।
ದ್ಭಾವನೆಯನಲ್ಲದಲೆ, ಲಿಪಿ ಭಾಷೆಗಳನೀಕ್ಷಿಸನು ॥ ೧೦ ॥

ಇಂಥ ಸದ್ಗುಣವಂತ ಲಕ್ಷ್ಮೀ।
ಕಾಂತನಮಲ ಪ್ರೇರಣದಿ ನಾಂ।
ಶಾಂತದಿಂ ಪೇಳುವೆನು ಯಮ ಪಾಶದಲಿ ಸಿಕ್ಕಿರ್ದ ॥
ಕಾಂತನನು ಬಿಡಿಸಿರ್ದ ಸತಿ ಸೀ-।
ಮಂತ-ಮಣಿ ಸಾವಿತ್ರಿ ಕಥೆಯನು।
ಅಂತರಿಸದಲೆ ಕೇಳಬೇಕೆಂದುಸುರುವೆನು ನಯದಿ ॥ ೧೧ ॥

ಧಾರುಣಿಯೊಳೀ ಸತ್ಕಥಾಮೃತ।
ವಾರು ಭಕುತಿಯೊಳಾಲಿಪರೊ, ಮೇ-।
ಣಾರು ಸದ್ಭಾವದೊಳು ಪೂಜಿಪರೀ ಮಹಾ ಸತಿಯ ॥
ಆರು ಬರೆದೋದುವರಿದನು, ಮೇ-।
ಣಾರು ಪಾಡುವರವರ ಗದಗಿನ।
**ವೀರನಾರಾಯಣನು** ಪೊರೆಯುವನಿಷ್ಟ ಫಲವಿತ್ತು ॥ ೧೨ ॥

---

ಮೇಲ್ವಾಲು-ಹೊಯ್ವಾಲು. (೧೦) ನೆರೆ-ಚನ್ನಾಗಿ. ಸಾವಧಾನದಿ-ಎಚ್ಚರಿಕೆಯಿಂದ. ಭಾವ-ಮನಸ್ಸು. (೧೧) ಕಾಂತ-ಗಂಡ. ಉಸುರುವೆನು-ಹೇಳುವೆನು. (೧೨) ಧಾರುಣಿ-ಭೂಮಿ. ಆಲಿಪರೊ-ಕೇಳುವರೊ ಪೊರೆಯುವನು-ಕಾಪಾಡುವನು. ಇತ್ತು-ಕೊಟ್ಟು.

## -: ಕಥಾ ಪ್ರಾರಂಭಃ-

ಸಂ. ಸೂ. ಪ.॥ ಪೊಡವಿಪತಿತಾಂ ಪುತ್ರ ಶೋಕದಿ।
ಕಡು ಬಳಲಿ ಬೆಂಡಾಗಿ ನಿಜಸತಿ।
ಯೊಡನೆ ಚಿಂತೆಯೊಳಿರಲು ಕಂಡನು ವರ ಮುನೀಶ್ವರನ ॥
ಒಂದು ದಿನ ರಜತಾದ್ರಿಯೊಳು ಪೂ-।
ರ್ಣೇಂದು ಧರ ಗಿರಿಜಾತೆಯೊಡನಾ- |
ನಂದದಿಂ ಕುಳಿತಿರಲು ಬಂದು ಸನತ್ಕುಮಾರಕನು ॥
ವಂದಿಸುತಃ— ಪೇಳಿಂದುಧರ ಸತಿ-।
ವೃಂದಕತಿ ಸೌಭಾಗ್ಯವಾವುದ।
ರಿಂದ ಲಭಿಸುವದೆನಗೆನಲು, ಗಿರಿಜೇಶನಿಂತೆಂದ || ೧೩ ||
ಲೇಸನಾಡಿದೆ, ಮುನಿವರನೆ ಸಂ-।
ತೋಷವಾಯ್ತಿಂದೆನಗೆ, ಕೇಳ್ ಕಮ-।
ಲಾಸನನ ನಿಜ ಸತಿಯಳಾಶೀರ್ವಾದದಿಂ ಜನಿಸಿ ॥
ಪಾಶಧರನುಸಿರೊಳಗೆ ಸಿಕ್ಕಾ-।
ಯಾಸ ಬಡುತಿಹ ಪತಿಯನಾ ಯಮ।
ಪಾಶದಿಂ ಬಿಡಿಸಿರ್ದ **ಸತಿ ಸಾವಿತ್ರಿ** ಸತ್ಕಥೆಯ || ೧೪ ॥
ಉರ್ವಿ ಪಾಲಕನಶ್ವಪತಿ ಎಂ- |
ಬೋರ್ವ ನೃಪ, ಮದ್ರಾಖ್ಯ ದೇಶದಿ।
ಸಾರ್ವಭೌಮಾಧಿಪನೆನಿಸಿ ಶೋಭಿಸುತ ಭೂ-ಸತಿಯ ||
ಸರ್ವ ಕಾಲದಿ ಪೊರೆದು ಸಿರಿಯಿಂ।
ಗರ್ವಿಸದೆ, ಧರ್ಮಾನುಸಾರದೊ- |
ಳಿರ್ವನವ ಪರಿಜನರ *ಪ್ರೇಮಾಸ್ಪದನು ತಾನಾಗಿ ॥ ೧೫ ॥

---

(೧೩) ರಜತಾದ್ರಿ-ಬೆಳ್ಳಿಯ ಪರ್ವತ, ಕೈಲಾಸ. ಇಂದು-ಚಂದ್ರ. ಲಭಿಸು-ದೊರಕು. (೧೪) ಕಮಲಾಸನನ-ಬ್ರಹ್ಮನ. ಪಾಶಧರ-ಯಮ. (೧೫)ಉರ್ವಿ-ಭೂಮಿ. ಪರಿಜನರ-ಪ್ರಜಾದಿಗಳ.

ಸಕಲ ವಿದ್ವಜ್ಜನರು, ಕಾಲಾಂ- ।
ತಕನ ಪೋಲುವ ಭಟರು, ಸಮಯೋ- ।
ಕ್ತಿಕ ವಿಶಾರದ ವಿಬುಧರಿಂದ್ರ ಮಹೇಂದ್ರ ಜಾಲಕರು ॥
ವಿಕಟ ರಸಿಕರು ಬ್ರಹ್ಮ ವಿದ್ಯಾ- ।
ಧಿಕರು, ನರ್ತಕಿಯರು ಮಹೀ ಪಾ- ।
ಲಕನ ಮಣಿ ಮಂದಿರದ ಸಭೆಯೊಳಗೆಸೆವರನು ದಿನದಿ ॥ ೧೬ ॥

ರಾಜ ರಾಜಾಧಿಪನೆನಿಸಿ ಸುರ- ।
ರಾಜನಿರ್ವಾವಾಸಮೆನೆ ಮಿಗೆ ।
ರಾಜಿಸುವ ಮಂದಿರದ ಹರಿವಿಷ್ಟರದಿ ಮದ್ರೇಶ ॥
ರಾಜಿಸುವ ಭೂಸುರ ಕುಲಾಬ್ಧಿಗೆ ।
ರಾಜನೆನೆ ನೆರೆ ವಿಸ್ತರಿಪ ಕವಿ- ।
ರಾಜನಾವನೊ? ಕಾಣೆ ಬಿಡದಂತವನ ವೈಭವವ ॥ ೧೭ ॥

ಲಾಲಿಸಜ ಸಂಭವನೆ ಪೊಡವೀ- ।
ಪಾಲಗಖಿಳಾ ಸಂಪದವು ಬಲು ।
ಗೀಳವಾಗಿಯೆ ತೋರಿದುದು ತನುಜಾತ ಹೀನತೆಗೆ ॥
ಆಳುವವರಾರುಂಟು? ವಂಶದ ।
ಏಳಿಗೆಯ ಖಂಡಿಸಲು ಬಂದಿಹ ।
ಕಾಲ ರೂಪವ ಪೊತ್ತೆನೆಂಬತಿ ಘನದ ಚಿಂತೆಯಲಿ ॥ ೧೮ ॥

ಪೊಡವಿ ಪಾಲಕರುವರದೊಳು ತಂ- ।
ದಿಡಿಸುತಡಿಗಡಿಗಮಿತ ಶೋಕದ ।
ಕಡಲಿನೊಳು ಮುಳುಗಿಸುವ ದುಚಿತವೆ? ಹಾಸ್ಯ ಮಾಡಲ್ಕೆ ॥

---

(೧೬) ಸಮಯೋಕ್ತಿಕ-ಪ್ರಸಂಗಕ್ಕೆ ಸರಿಯಾಗಿ ಮಾತನಾಡುವ. ವಿಶಾರದ-ಕುಶಲ. ಬುಧ-ಪಂಡಿತ. ವಿಕಟ-ಬಹಳ. (೧೭) ಸುರರಾಜ-ದೇವೇಂದ್ರ ಆವಾಸ-ಮನೆ. ರಾಜಿಸು-ಶೋಭಿಸು ಹರಿವಿಷ್ಟರ-ಸಿಂಹಾಸನ. ರಾಜ-ಚಂದ್ರ. (೧೮) ತನುಜಾತ-ಮಗ. ಕಾಲ-ಯಮ.

ಕೆಡವಿ, ಬಿದ್ದಿಹನೆಂದು ಹರುಷದಿ।
ಕಡು ನಗೆಯ ಬೀರುವರು ಲೋಕದ।
ಒಡೆಯರಪ್ಪರೆ ದೇವ! ಎನುತವನಂದು ಬಿಸುಸುಯ್ದ ॥ ೧೯ ॥

ಏಕೆ ಪುಟ್ಟಿಸಿದೆಲೆ ವಿಧಿಯೆ? ಮ- ।
ತ್ತೇಕೆ ಕೊಟ್ಟೆಲೊ ಸಕಲ ವೈಭವ।
ಕಾಕು ದೈವಿಗೆ? ಲೋಕದೊಳಗಿನ್ನಿಲ್ಲ ಎನ್ನುಳಿದು ॥

ನೀ ಕೊಡಲು, ಸತ್ಪುತ್ರರೊಡನಾ ।
ನೇಕರಾ ದಾರಿದ್ರ್ಯ ಶೋಕದಿ।
ನೂಕುವರು ದಿನಗಳನು, ಕೊಡು ಹೋಗೆಂದನವನೀಶ ॥ ೨೦ ॥

ಹಸಿದು ಬಳಲುತ ಬಂದ ಮನುಜರಿ- ।
ಗಶನವನ್ನೀಯದಲೆ, ಹರುಷದಿ।
ಮಿಸುಪ ಹಾಸಿಗೆ ಹಾಸಿದೊಡೆ ಕೊಂಡಾಡುವರೆ ತನ್ನ ॥

ಹಸುಳರಿಲ್ಲದವರ್ಗೆ ಭಾಗ್ಯವು, ।
ಹಸುಳಯುತರಿಂಗಾ ದರಿದ್ರ್ಯವು ।
ಎಸೆಯುವದೆ ಎಲೆ ದೇವ! ಕೊಟ್ಟುದರಿಂದ ಫಲ ಬಹುದೆ? ॥ ೨೧ ॥

ಪುತ್ರ ಹೀನರಿಗಿಲ್ಲ ಗತಿ, ಎಂ- ।
ದುತ್ತಮೋತ್ತಮ ಶೃತಿಗಳುರೆ ಸಾ- ।
ರುತ್ತಲಿರುವದು ಪುಸಿಯಹುದೆ? ದುರ್ಲಭದ ದೇಹವನು ॥

ಹೊತ್ತು ಸಾರ್ಥಕವೇನು? ಕರುಣಾ ।
ವೃತ್ತಿ ಪೋಯಿತೆ! ಪೊರೆ ಎಲೈ ಪುರು- ।
ಷೋತ್ತಮನೆ ನಡುನೀರಿನೊಳು ಕೈ ಬಿಡುವುದನುಚಿತವು ॥ ೨೨ ॥

---

(೧೯) ಕಡಲು—ಸಮುದ್ರ. (೨೦) ಕಾಕು-ಕೆಟ್ಟ ಉಳಿದು-ಬಿಟ್ಟು. ಅವನಿ-ಭೂಮಿ. (೨೧) ಹಸುಳರು—ಮಕ್ಕಳು. (೨೨) ಸಾರುತ್ತಲಿರುವುದು-ಹೇಳುತ್ತಿರುವುದು. ದುರ್ಲಭ—ಅಸಾಧ್ಯ. ಅನುಚಿತವು-ಅಯೋಗ್ಯವು.

ಎಷ್ಟು ಮರಗುವಳಬಲೆ! ದಿನದೊಳ ।
ಗೆಷ್ಟು ಕೃಶಳಾಗಿಹಳೊ, ದೈವವ ।
ನೆಷ್ಟು ಹಳಿವಳೊ! ಬಳಲಿಹಳೊ! ಕಳವಳಿಸಿರುವಳಿನ್ನ ॥
ಎಷ್ಟು ಶಪಿಸುತ್ತಿಹಳೊ ಮನದೊಳ ।
ಗೆಷ್ಟು ಕಾತಳಗೊಂಡಿರುವಳ- ।
ಧೃಷ್ಟವೆಂತಹದಿಹುದೆನುತ ಚಿಂತಿಸುವ ಸಮಯದಲಿ ॥ ೨೩ ॥

ನೊಂದು ಪಥದಲಿ ತಿರುತಿರುಗಿ ಕಳೆ- ।
ಗುಂದುತೊಂದರಗಳಿಗೆ ವಿಶ್ರಮ- ।
ಕೆಂದು ವೇಳೆಯದಿಲ್ಲದಿರುವೀ ಕಾರ್ಯವೆಂತಹದೊ ॥
ಬೆಂದೆನಿದರೊಳು ಬಹಳವೇನರ- ।
ವಿಂದಿನಿಯ ಕೂಡಾ ವಿಲಾಸಕೆ ।
ಯೊಂದು ನಿಮಿಷವು ದೊರೆಯದೆಂತಹ ಕಾರ್ಯ ಸಮನಿಸಿತೊ ॥ ೨೪ ॥

ಒಂದು ಗಾಲಿಯ ರಥವದಕೆ ಬಲು ।
ಅಂದಗೇಡಿಗ ಸಾರಥಿಯು ಬ- ।
ಲ್ಪಿಂದ ಸೊಕ್ಕಿದವೇಳು ಕುದುರೆಗಳಿಂಥ ವೈಭವವ ॥
ನೊಂದು ಕೊಟ್ಟಿಹನೆಷ್ಟೊ ಮಾಧವ ।
ನೆಂಬು ಘನತರ ರೋಷದಿಂದರ- ।
ವಿಂದಸಖ ಕಿಡಿಯಾದವನೆನೆ ಕಣ್ಗೆಸೆವ ಪಶ್ಚಮದಿ ॥ ೨೫ ॥

ಕಲ್ಲು ಹೃದಯಿಗಳಾ ಪುರುಷರೆಂ- ।
ದೆಲ್ಲಿ ಕೇಳಿದೊಡಲ್ಲಿ ನುಡಿವಾ ।
ಕಲ್ಲು ಹೃದಯದ ಪುರುಷನೀಪರಿ ಶೋಕಿಸಲ್ಕವನ ॥

---

(೨೩) ಅಬಲೆ-ಸ್ತ್ರೀ.( ಹೆಂಡತಿ ) ಕೃಶ-ಸೊರಗು. ಕಾತಳ-ಸಿಟ್ಟು. (೨೪) ಪಥ-ಹಾದಿ ಅರವಿಂದಿನಿ-ಕಮಲಿನಿ ( ಸೂರ್ಯನಿರುವಾಗಲೇ ಅರಳಿರುವದರಿಂದ ಆ ಕೆಂದಾವರೆಗಳಿಗೆ ಸೂರ್ಯನ ಹೆಂಡತಿಯರೆಂದು ಕವಿಕಲ್ಪನೆ. ) (೨೫)ಬಲ್ಪಿಂದ-ಪ್ರಾಯದಿಂದ. ಅರವಿಂದಸಖ-ಸೂರ್ಯ

ವಲ್ಲಭೆಯ ದುಃಖಾತಿರೇಕದ ।
ಸೊಲ್ಲು ಪೇಳಲ್ಕಳವಿಹುದೆ ನರೆ ।
ಬಲ್ಲವನು ನೀನೇ ವಿಚಾರಿಪುದವಳ ಶೋಕವನು || ೨೬ ||

ಕೇಳಜಾತ್ಮಜ ಮನದೊಳಾ ಭೂ |
ಪಾಲನೀಪರಿ ಚಿಂತಿಸುತ ಸತಿ ।
ಯಾಲಯಕೆ ಪೊರಮೊಟ್ಟನಾ ಸಮಯದೊಳಗುರೆ ನೊಂದು ||
ಜಾಲದಲಿ ಬಿದ್ದೆರಳೆ ಯಂದದೊ- ।
ಳಾ ಲತಾಂಗಿಯು ಪುತ್ರ ಶೋಕದ ।
ಜಾಲದಲಿ ಕಡು ಬಳಲಿದುದಕಿಂತೆಂದ ನಿಜಸತಿಗೆ— || ೨೭ ||

ಶೋಕವೇತಕೆ *ತ್ರಿಭುವನದಿ ಬಲು |
ಕಾಕು ದೈವಿಗಳಾವು ವಿಧಿಯ ಪ- |
ರಾಕು ಮುರಿವವರುಂಟೆ ಲೋಕದಿ, ತಿಳಿದು ನೋಡಲ್ಕೆ ॥
ಆಕಮಲ ಸಖ ಕಮಲನಾಭರಿ- ।
ಗಾಕಮಲಜನ ಲಿಖಿತ ತಪ್ಪಿತೆ ।
ನೀ ಕುದಿದು ಕೊರಗಲ್ಕೆ ಫಲವೇನಿಹುದು, ಪೇಳೆನಗೆ ॥ ೨೮ ॥

ರಾಯನಾಡಿದ ನುಡಿಗೆ ಜಲಜ ದ- ।
ಳಾಯತಾಕ್ಷಿಯು ಶೋಕದಿಂದಲಿ— ।
ಬಾಯಿಲಾಡಲು ಬಲು ಶುಲಭ ವಿಹುದಾ ವಿರಕ್ತತೆಯು ॥
ಬಾಯಿ ಮಾತಿನೊಳೇನು ಫಲವಾ- ।
ಮಾಯ ಗೆಲ್ಲಲು ವರ ಮುನಿಗಳತಿ ।
ಗಾಯದಿಂದಲಿ ತಪವ ಮಾಡಿದೊಡಿಲ್ಲ ಸಾಧ್ಯವದು ॥ ೨೯ ॥

(೨೬) ವಲ್ಲಭೆ—ಹೆಂಡತಿ. ಸೊಲ್ಲು-ಬಗೆ(ಮಾತು). (೨೭) ಅಜ-ಬ್ರಹ್ಮ. ಜಾಲ-ಬಲೆ. ಎರಳೆ—ಜಿಗರಿ. (೨೮) ಕಮಲನಾಭ—ವಿಷ್ಣು, ಕಮಲಜ ಬ್ರಹ್ಮ. (೨೯) ರಾಯ-ತ್ಸ. ರಾಜ. ನಳಿನ-ಕಮಲ. ಆಯತ—ವಿಶಾಲ. ಅಕ್ಷಿ—ಕಣ್ಣು.

ಕಳೆದ ಜನ್ಮದೊಳಾವ ಸತಿಯಳ |
ಯಳೆ ಮಗುವ ಕೊಂದಿರುವೆನದರಿಂ ।
ಕಳೆಯುವೆನೊ ಶಿಶುಹೀನಳಾಗೀ ಸತಿಯ ಜನ್ಮವನು ॥
ನಳಿನ ಪೀಠನದೇನು ತಪ್ಪಿದ |
ೊಳಗೆ, ಬಿತ್ತಿದ ಬೀಜದಂದದಿ ।
ಬೆಳೆಯು ಬರ್ಪುವದಲ್ಲದಲೆ ಜೀಡಿದ್ದು ಬೆಳೆಯುವದೆ || ೩೦ ॥

ನಂದನನ ಮೊಗದಾವರೆಯುನಾ |
ನಂದದಿಂ ಮುದ್ದಿಸುತ ದಟ್ಟಡಿ- ।
ಯಂದವನ್ನೀಕ್ಷಿಸುತ ತೊದಲಿಸುತಾ*ಡ್ವ ಕಿರಿನುಡಿಯ ॥
ನಂದದಿಂ ಲಾಲಿಸುತ ನಲೆಯುವ ।
ಚಂದ್ರಮುಖಿ ತಾನೆಷ್ಟು ಪುಣ್ಯವ |
ಪೊಂದಿ ಬಂದಿಹಳೀ ಧರಿತ್ರಿಯೊಳವಳಿಗೆಣೆ ಯುಂಟೆ ॥ ೩೧ ॥

ಈ ಪರಿಯೊಳತಿ ಚಿಂತೆಯಿಂದಿರೆ |
ತಾಪಸೋತ್ತುಮ ನೋರ್ವ ನೈದಿಹ |
ನಾಪುರದ ಬಾಗಿಲದೊಳೆಂದಾ ಚರ ನುಸುರೆ ಕೇಳ್ದು ||
ಭೂಪತಿಯು ಕಡು ಹರುಷದಿಂದಾ |
ತಾಪಸನ ಕರೆತಂದು ಬಹುವಿಧಿ- |
ಧೋಪಚಾರಗಳಿಂದ ಸಿಂಹಾಸನದಿ ಕುಳ್ಳಿರಿಸಿ ॥ ೩೨ ॥

ಇತಿ ಶ್ರೀ ಕವಿಕಿಂಕರ ತೊರವೆ ರಾಘವಾಂಕ ಕವಿ ವಿರಚಿತ

**ಸತಿ ಸಾವಿತ್ರಿ ಮಹಾತ್ಮೆಯೊಳ್ ಪ್ರಥಮೋಧ್ಯಾಯ**

ಪದ ೩೨ ಕ್ಕೆ ಮಂಗಲಮಸ್ತು.

---

(೩೦) ನಳಿನ ಪೀಠ—ಬ್ರಹ್ಮ. (೩೧) ನಂದನ-ಮಗ. ಅಂದ-ಚಂದ. ಎಣೆ-ಸರಿ. (೩೨) ತಾಪಸ-ತಪಸ್ವಿ. ಐದಿಹ-ಬಂದಿಹ.

# -: ಅಥ ದ್ವಿತೀಯೋಧ್ಯಾಯ :-

ಸಂ. ಸೂ. ಪ. ॥ ವರ ಮುನಿಗಳುಪದೇಶದಿಂದಾ ।
ಧರಣಿಪತಿ ವಿಪಿನಾಂತರಕೆ ತಾಂ ।
ಪೊರಮೊಡಲು ತೋರಿದವು ಶುಭ ಶಕುನಗಳು ಕಂಗಳಿಗೆ ॥

ಬಂದ ಮುನಿ ಪುಂಗವನ ಪರಮಾ ।
ನಂದದಿಂದಾದರಿಸಿ ಪುಷ್ಪ ಸು- ।
ಗಂಧ ಮಾಲ್ಯಾದಿಗಳೊಳರ್ಚಿಸು ತವರ ಪದಯುಗಕೆ ॥
ವಂದಿಸಲ್ಕಷ್ಟಾಂಗದಿಂ " ಮನ- ।
ದಂದ ಸಿದ್ಧಿಪುದೇಳೆ " ನುತ ಲಾ- ।
ನಂದದಿಂ ಪಿಡಿಪೆತ್ತಿ ಬೆಸಗೊಂಡನು ಮುನಿಶ್ರೇಷ್ಟ ॥ ೧ ॥

ನಿರುತ ಶಾಂತಾಕಾರದಿಂದೀ ।
ಧರೆಯ ನಾಲ್ವಾದಿಸುವ ಮುಖ ಚಂ- ।
ದಿರಗೆ ಚಿಂತಾ ಗೃಹಣ ವಿಂದೇಕಾಯ್ತು ಪರಿಜನರ ॥
ಪೊರೆವವನು ನೀ ನಿನಿತು ಚಿಂತಾ ।
ತುರದಿ ವೈಮರೆದಿರುವ ಬಗೆಯದು ।
ಸರಸ ಮುಪ್ಪುದೆ ರಾಯ ಬಿಡು ಕಾತರಿಪುದೇಕಿನ್ನು ॥ ೨ ॥

ಎಂದೊಡನೆ ನೃಪ ಮೌಳಿ ಯತಿ ನಯ ।
ದಿಂದ ಘನ ಸಂಸೃತಿಯ ಮಾಯಾ ।
ಬಂಧನವ ಕುಗ್ಗಿಸುವ ಸಂತತಿ ಕಾಣೆ ನೀವರೆಗು ॥
ಮುಂದೆನಗೆ ಗತಿಯೇನು ಜನ್ಮವು ।
ಬಂದುದಕೆ ಸಾರ್ಥಕವದೇನಾ- ।
ಯ್ತೆಂದೊಡನೆ ಮುನಿನಾಥ ಕರುಣದಿ ನುಡಿದನರಸಂಗೆ ॥ ೩ ॥

---

ಸೂ) ವಿಪಿನ–ಅರಣ್ಯ. ಕಂಗಳು-ಕಣ್ಣು. (೧) ಪುಂಗವ-ಶ್ರೇಷ್ಟ. ಅರ್ಚಿಸು ಪೂಜಿಸು. ಬೆಸಗೊಂಡನು–ಕೇಳಿದನು. (೨) ನಿರುತ-ಯಾವಾಗಲೂ (೪) ಮೌಳಿ-ತಲೆ ( ಶ್ರೇಷ್ಟ ) ಸಂಸೃತಿ-ಸಂಸಾರ.

ಚಿತ್ತಯಿಸು ವಸುಧೀಶ ನಿನಗೊಂ- ।
ದುತ್ತಮೋಪಾಯವನು ಪೇಳುವೆ ।
ನಿತ್ಯದೊಳಗತಿ ಭಕ್ತಿಯಿಂ ಪ್ರಾರ್ಥಿಸುವ ಭಕ್ತರಿಗೆ ॥
ಸತ್ಯದಿಂದಿಷ್ಟಾರ್ಥವೀಯುವ ।
ಉತ್ತುಮರೊಳತ್ಯುತ್ತಮಳ್ ಸಾ- ।
ವಿತ್ರಿಯಂ ತಪಗೈದು ಮೆಚ್ಚಿಸಿ ಪಡೆವುದಾತ್ಮಜನ ॥ ೪ ॥

ಲೇಸನಾಡಿದೆ! ಯಲೆ ಮುನಿಪ, ಪತಿ- ।
ಭಾಷೆಯನು ಸಟಿಗೈವ ಸತಿ ಮ- ।
ತ್ತೀಸಕಲ ಭೂತಳದಿ ಪುಡಕಿದೊಡಾವಳಿರ್ದಪಳು ॥
ಆ ಸರಸಿಜೋದ್ಭವನ ಲಿಖಿತವ ।
ನಾಶ ಪಡಿಸೆಂದವನ ಸತಿಗೆಲೆ ।
ಭೂಸುರೋತ್ತುಮ ಪೇಳಲೆಂತೆಂದನು ಮಹೀಪಾಲ ॥ ೫ ॥

ಭೂಮಿಪನ ನುಡಿಗೇಳ್ದು ಕರುಣದೊ- ।
ಳಾ ಮುನಿಪ ನಸು ನಗುತಲರಸಂ- ।
ಗೀ ಮಹಿಯೊಳಿನ್ನಾರು ಪೇಳ್ದರು ನಿನ್ನ ಘಣಿಯೊಳಹ ॥
ಆ ಮಹಾ ವಿಧಿಲಿಖಿತವರ್ಥವ ? ।
*ಪ್ರೇಮದಿಂದಿತ್ತುಚಿತ ವೇನದು? ।
ಕಾಮಿಗಳ **ಕಾರ್ಯಾಂತ ಫಲವೇ ದೈವ** ತಿಳಿಯೆಂದ ॥ ೬ ॥

ಉಣ್ಣುವದು ದೈವದೊಳಗಿದ್ದರೆ ।
ಯುಣ್ಣುವೆನು ನಾನೆಂದೊಡಾ ವಿಧಿ ।
ಯುಣ್ಣಿಸಲು ಬರ್ಪುವನೆ? ಪಡೆ ಸನ್ನಾಹವಿಲ್ಲದಲೆ ॥

(೪) ವಸುಧಾ-ಭೂಮಿ. ನಿರ್ಮಲ-ಶುದ್ಧ. (೫) ಸಟಿ–ಸುಳ್ಳು. ಲಿಖಿತ–ಬರಹ. ಮಹೀ-ಭೂಮಿ. (೬) ಉಚಿತ-ಇನಾಮು. ಕಾಮಿಗಳ-ಫಲಾಪೇಕ್ಷಿಗಳ (೭) ಪಡೆ-ಸೈನ್ಯ. ಸನ್ನಾಹ-ಸಜ್ಜು.

ಉನ್ನತದ ಸಂಗ್ರಾಮದೊಳು ತನ- ।
ಗಿನ್ನು ಜಯ ದೈವದೊಳಗಿದ್ದರೆ ।
ಬನ್ನ ಬಡುವುದದೇತಕೆನೆ, ದೊರೆಯುವಳೆ ಜಯಲಕ್ಷ್ಮೀ ॥ ೭ ॥

ಇದನರಿತು ಭೂಪಾಲ, ಮನದಲಿ ।
ಕುದಿಕುದಿದು ವಿಧಿಲಿಖಿತದೊಳಗಿಹ ।
ಹದನವನ್ನರಿಯದಲೆ ಕೊರಗದೆ ಧೃಡ ಸುಭಕ್ತಿಯಲಿ ॥
ಮುದದೊಳಾಸಾವಿತ್ರಿಯಂ ನೆರೆ ।
ಸದಮಲಾನಂದದೊಳು ಪೂಜಿಸಿ ।
ವಿದಿತ ಫಲವನು ಪಡೆದು ಸುಖಿಯಾಗಿರು ನಿರಂತರದಿ ॥ ೮ ॥

ಲಾಲಿಸಜ ಸಂಭವನೆ! ಪೊಡವೀ ।
ಪಾಲಗೀಪರಿ ನುಡಿದು ಮುನಿಯಾ ।
ಕಾಲದಲಿ ಪೊರಮಟ್ಟ ತನ್ನಾಶ್ರಮಕೆ ನೃಪತನ್ನ ॥
ಶ್ರೀ ಲತಾಂಗಿಯಳೊಡನೆ *ಪ್ರೇಮದ ।
ಲೀಲೆಯಿಂದಾದಿನದ ರಜನೀ- ।
ಯಾಳಿಕೆಯ ಕಳೆಯುತಿರಲಾಯ್ತು ನಿಶಾಂತಯಾಮವದು ॥ ೯ ॥

ಬೀಸಿದುದು ತಂಗಾಳಿ, ನಳಿನ ವಿ- ।
ಕಾಸಿದುದು, ನೈದಿಲೆಗೆ ಸುಪ್ತಿಯು ।
ಸೂಸಿದುದು, ಪತಿ-ಬಾಹು-ಬಂಧ ವಿಮೋಚಿದುದು ಸತಿಗೆ ॥
ನಾಶವಾದುದು ತಿಮಿರ, ಜನಸಂ- ।
ತೋಷಿದುದು ತಾರಾಂಗನೆಯ ಮೊಗ ।
ವಾಸಿದುದು ನಿಶೆಯಾಂತದರುಣೋದಯದೊಳಾ ದಿನದಿ ॥ ೧೦ ॥

---

ಬನ್ನ-ಕಷ್ಟ. (೮) ವಿಧಿ-ಬ್ರಹ್ಮ. ವಿದಿತ-ಅಪೇಕ್ಷಿಸುವ. ನಿರಂತರ-ಯಾವಾಗಲೂ. (೯) ಪೊರಮಟ್ಟ-ಹೊರಟನು. ರಜನೀ-ಕತ್ತಲೆ. ನಿಶಿ-ಕತ್ತಲೆ. ಯಾಮ- ಧ್ದ. ಜಾವ. (೧೦) ವಿಕಾಸು-ಅರಳು. ನೈದಿಲೆ-ರಾತ್ರಿಕಮಲ. ಸುಪ್ತಿ-ನಿದ್ದೆ. ತಿಮಿರ-ಕತ್ತಲೆ.

ಮೂಡವೆಣ್ಣಿನ ಪುಣ್ಯ ರಾಶಿಗೆ |
ಪಾಡದಾವುದು ದೇವಪಾವನ ।
ಬೇಡಿ ಪಡೆದಳೊ ವರವ, ಲೋಕೇಕ್ಷಣನು ಸುತನಾಗೆ ||
ನೋಡಿರಾ ವರ ಗರ್ಭ ಲಾಂಛನ |
ಕೂಡಿತೆಂದು ಕವೀಂದ್ರ ಕಲ್ಪನೆ ।
ಮಾಡುವಂದದಿ ಶುಭ್ರವಾದಳು ಪೂರ್ವ ಲಲಿತಾಂಗಿ || ೧೧ ||

ಸೂರ್ಯನುದಯಾದ್ರಿಯೊಳಡರೆ ನೃಪ ।
ಸಾರ್ವಭೌಮನು ಮಿಂದು ನಿತ್ಯದ ।
ಸರ್ವವಿಧಿ ನಿಯಮಗಳ ತೀರಿಸಿ ಕರೆದು ಸಚಿವನನು ||
ಉರ್ವಿಯಂ ಪಾಲಿಪುದು ಗುರು ಮುನಿ- ।
ವರ್ಯನುಸುರಿದ ತೆರದಿ ವಿಪಿನದೊ- ।
ಳಿರ್ದೆನಾಂ, ಸಾವಿತ್ರಿಯಾರಾಧನದಿ ನೀನಿನ್ನು || ೧೨ ||

ರಕ್ಷಿಪುದು ರಾಜ್ಯವನು, *ಪ್ರಜೆಗಳ |
ನೀಕ್ಷಿಪುದು ತವ ತನುಜರಂದದಿ |
ಶಿಕ್ಷಿಪುದು ದುರ್ಮಾರ್ಗಿಗಳನತಿ ಕರುಣದೋರದಲೆ ||
ದಕ್ಷತೆಯೊಳಾಶ್ರಮಿಗಳಂ ಸಂ- ।
ರಕ್ಷಿಪುದು ಯೋಗ್ಯಾನುಚಿತವ ನಿ- ।
ರೀಕ್ಷಿಪುದು ನೆರೆ ಸಾವಧಾನದೊಳಿನ್ನು ರಾಜ್ಯದೊಳು || ೧೩ ||

ಸಿರಿಯ ಮೋಹಾಸ್ತ್ರದೊಳು ಸಿಲುಕಿದ ।
ಹರಿ ಯುವಳ ತೌರೂರಿನಲಿ ಬಲು |
ಸರಸವಾಡುತ ದೇವಪುರ-ಶೃಂಗಾರವನು ತೊರೆದು ||

---

(೧೧) ಮೂಡವೆಣ್ಣು-ಪೂರ್ವದಿಕ್ಕೆಂಬ ಸ್ತ್ರೀ. ಲೋಕೇಕ್ಷಣ-ಸೂರ್ಯ. ಲಾಂಛನ-ಗುರ್ತು. (೧೨) ಮಿಂದು-ಸ್ನಾನಮಾಡಿ. ಸಚಿವ-ಮಂತ್ರಿ, (೧೩) ಆಶ್ರಮಿಗಳಂ- ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸನ್ಯಾಸ ಎಂಬ ೪ ಆಶ್ರಮದವರನ್ನು. (೧೪) ಸಿರಿಯ ತೌರೂರು-ಕ್ಷೀರಸಾಗರ.

ಉರಗನೋಳ್ಮೈತ್ರ ಮರೆದು ಮಲಗಿರೆ।
ನರರು ಲಕ್ಷ್ಮಿ ಕಟಾಕ್ಷದಿಂದಲಿ।
ಮರುಳರಾಗುವದೇನಚ್ಚರಿಯಲ್ಲ ಲೋಕದಲಿ ॥ ೧೪ ॥

ಮರೆವರಾರಿಹೆವೆಂಬುದನು ತಮ-।
ಗಿರುವಳಾಚಂದ್ರಾರ್ಕ ಸಿರಿ ಯೆಂ-।
ದರಿತು ನೃಪ ಮರೆದಿರುವರೆಮಗಿನ್ನಾರು ಸಮರೆಂದು ॥
ಇರಲಿನಿತು ಕ್ಷಣ ಸುಖ ವಿಕಾರದಿ।
ಧರೆಯ ಬೆಳಗುವ ಕೋಲುಮಿಂಚಿನ।
ತೆರದೊಳಾ ಸಿರಿಯಡಗೆ ಯಾಚಿಸು ತಿರ್ಪರಜ್ಞ ಜನ ॥ ೧೫ ॥

ತಿಳಿದು ಲಕುಮಿ ಗುಣಂಗಳೆಲ್ಲವ।
ಕೊಳಗುಳದಿ ವಸುಧೀಶರಸ್ತ್ರವ।
ಸೆಳೆದು ರಕ್ತಸ್ರಾವದಿಂ ರಣ ದೇವತೆಯನೆರೆದು ॥
ತೊಳಲುತಿರೆ ವೈಭವಕೆ, ನಿನಗಿ।
ನ್ನಿಳೆಯು ತಾನಾಯಾಸ ವಿಲ್ಲದೆ।
ಯೊಲದಿರಲು ನೃಪ ಮರಿಯ ಬೇಡೆಲೆ ಸಚಿವ ಕೇಳೆಂದ ॥ ೧೬ ॥

ಬಲ್ಲಿದನು ನೀನೆಲ್ಲ ವಿಷಯವ।
ನಿಲ್ಲ ನಮ್ಮರಸೆಂಬ ದುಃಖದ।
ಸೊಲ್ಲು *ಪ್ರಜರಿಂಚಾರದಂತೀ ಧರೆಯ ರಕ್ಷಿಸಲು ॥
ಇಲ್ಲ ನಿನ್ನಳಿದೆಂದು ರಾಜ್ಯವ।
ನೆಲ್ಲ ನಿನಗರ್ಪಿಸಿದೆ ಕುಶಲದೊ।
ಳಿಲ್ಲ ಕೀರ್ತಿಯ ಕಾರ್ಯ್ಯ ಭಾರವು ನಿನ್ನ ಮೇಲೆಂದ ॥ ೧೭ ॥

---

ಉರಗ-ಸರ್ಪ ಕಟಾಕ್ಷ-ಕಡೆಗಣ್ಣಿನ ನೋಟ(ಒಲುಮೆ) (೧೫) ಆಚಂದ್ರಾರ್ಕ-ಸೂರ್ಯ ಚಂದ್ರರಿರುವ ವರೆಗೆ. ಯಾಚಿಸು-ಭಿಕ್ಷೆಬೇಡು. (೧೬) ಕೊಳಗುಳದಿ-ರಣಭೂಮಿಯಲ್ಲಿ. (೧೭) ಬಲ್ಲಿದನು-ತಿಳಿದವನು. ಅರ್ಪಿಸು-ಒಪ್ಪಿಸು.

ಉಟ್ಟನೀಪರಿ ನುಡಿದು ನಾರಿನ।
ಬಟ್ಟೆಯನು, ಮನ-ಮರ್ಕಟವ ನೆರೆ।
ಕಟ್ಟಿದನು ಸುಜ್ಞಾನ ಪಾಶದಿ ಮಿಟ್ಟು ಮಿಸುಕಿಸದೆ ||
ಸುಟ್ಟನಾ ಷಡ್ರಿಪುಗಳನು, ಮನ।
ವಿಟ್ಟನಾ ಸಾವಿತ್ರಿಯೊಳ್ ಪೊರ।
ಮಟ್ಟನಂತಃಪುರಕೆ ಕಾಣಲು ನಿಜಸತಿಯನಾಗ || ೧೮ ||

ತೋರೆ ತನ್ನಯ ಪತಿಯ ರೂಪವ।
ತಾರೆಗಂಗಳೆಯಾಗ ಪತಿ–ಪದ।
ವಾರಿಜಕೆ ವಂದಿಸುತ—*ಕ್ಷಮಿಸಲ್ಬೇಕು ನಿಜ ಸತಿಯ ||
ಘೋರತರದಪರಾಧವನು ತಡ–।
ದೋರಿದುದಕೆನಗೀಗ ವಲ್ಕಲ-।
ಧಾರಿಯಾಗಲು ದೊರೆಯಬೇಕವಕಾಶವೆನಗೆನಲು || ೧೯ ||

ಕೇಳಿನಿಜಸತಿ ನುಡಿಯ ಪೊಡವೀ-।
ಪಾಲ— ಬರಲೇನಿಹುದು ನಿನಗಾ।
ಕಾಳ ಕಟ್ಟಡವಿಯಲಿ ಸುಖನೀ ರಾಜ್ಯ ವೈಭವದ ||
ಗಾಳಿಸಹ ಬರದಲ್ಲಿ, ಕಷ್ಟದಿ।
ಕಾಲಗಳೆಯಲು ಬರಲದಾವನು।
ಪೇಳಿದನು ನೆರೆ ತಿಳಿಮ ನೊಡಿಂತೆಂದ ನಿಜ ಸತಿಗೆ || ೨೦ ||

ರಾಯನಾಡಿದ ನುಡಿಗೆ ಪದ್ಮದ-।
ಳಾಯತಾಕ್ಷಿಯು— ಸತಿಗೆ ಪತಿ-ಪದ।
ತೋಯಜಕ್ಕಿಂತಧಿಕವೇ ರಾಜ್ಯಾದಿ ಭೋಗಗಳು ||

---

(೧೮) ಮಿಟ್ಟುಮಿಸುಕದಲೆ-ಚಿಂತೆಯು ಉಲುಕದ ಹಾಗೆ. ಷಡ್ರಿಪು-ಕಾಮ, ಕ್ರೋಧ, ಮೋಹ, ಲೋಭ, ಮದ, ಮತ್ಸರ. (೧೯) ತಾರೆಗಂಗಳೆ–ನಕ್ಷತ್ರದಂತೆ ಕಣ್ಣುಳ್ಳವಳು. ವಲ್ಕಲ–ನಾರುಬಟ್ಟೆ. (೨೦) ಕಾಳ-ಕೆಟ್ಟ. (೨೧) ಪದ್ಮ-ಕಮಲ, ತೋಯಜ-ನೀರಿನಲ್ಲಿ ಹುಟ್ಟಿದ್ದು, ಕಮಲ.

ಜೀಯ ಸತಿ ಧರ್ಮವನು ಬಿಟ್ಟ– ।
ನ್ಯಾಯ ಪಥದಿಂ ನಡೆಯಲವಳಿಗೆ ।
ಮಾಯಜಲಧಿಯ ದಾಂಟಲಿನ್ನೇನಿಹುದು ಸಾಧನವು ॥ ೨೧ ॥
ಪೊರೆಯಲೆಂತಂಗನೆಯು ಜನ್ಮವ ।
ಧರಣಿಯೊಳು ಪತಿ ಮುಖ ವಿಯೋಗ– ।
ಸ್ಮರಣೆಯನು ಸೈರಿಸಲುಪಾಯವದೇನಿಹುದು ಮತ್ತೆ ॥
ಅರಳುವದೆ ಹೃತ್ಕಮಲ ಪತಿ ಭಾ– ।
ಸ್ಕರನ ಮುಖಗಾಣದಲೆ ತಿಳಿ ಯೆಂ ।
ದರಸನಡಿದಾವರೆಗೆರಗಿ ನುಡಿದಳು ಸರೋಜ ಮುಖಿ ॥ ೨೨ ॥
ಆದೊಡೆಲೆ ಪತಿರಾಯ ತಮ್ಮಯ ।
ಪಾದುಕೆಯನೆನಗಿತ್ತು ಪೋದೊಡೆ ।
ಯೀ ಧರೆಯೊಳಾಂ ಪೊರೆವೆ ಜನ್ಮವ ನಿಲ್ಲದೊಡೆ ತಮ್ಮ ॥
ಪಾದ ಪಂಕೇರುಹಕೆ ತನುವ ನಿ– ।
ವೇದಿಸುವೆನೆನಲಾ ಲತಾಂಗಿಯ ।
ನಾದರಿಸಿ ಪಾದುಕೆಯ ಕೊಟ್ಟವನೀಶ ಪೊರಮಡಲು ॥ ೨೩ ॥
ತೋರಿದವು ಕಂಜಾಕ್ಷಿಯರ ಜಲ– ।
ಪೂರಿತದ ಕುಂಭಗಳು, ಶುಕತತಿ ।
ಪಾರಿದವು, ಬಲಗಟ್ಟಿದವು ಕಾಕಾಳಿ ಗೊ ನಿಕರ ॥
ಸಾರಿದವು ಗಜವಾಜಿ, ಕಂಪುರೆ ।
ಬೀರಿದವು ಪೂದೋಟ, ಪರಮಾ ।
ಕಾರದೀ ಶುಭ ಶಕುನಗಳ ಕಂಡನು ಪುರಾಗ್ರದಲಿ ॥ ೨೪ ॥



ಇತಿ ಶ್ರೀ ಕವಿಕಿಂಕರ ತೊರವೆ ರಾಘವಾಂಕ ಕವಿ ವಿರಚಿತ

**ಸತಿ ಸಾವಿತ್ರಿ ಮಹಾತ್ಮೆಯೊಳ್ ದ್ವಿತೀಯೋಧ್ಯಾಯ**

ಪದ ೫೭ ಕ್ಕೆ ಮಂಗಲಮಸ್ತು.

## -:ಅಥ ತ್ರಿತಿಯೋಧ್ಯಾಯ:-

ಸಂ. ಸೂ. ಪ. ॥ ವಿಪಿನದೊಳ್ಸಾವಿತ್ರಿಯಂ ಬಹು।
ತಪದಿ ಮೆಚ್ಚಿಸಿ ಮರಳಿ ಬರಲಾ-।
ತಪದ ಮಹಿಮೆಯೊಳಾಗ ಗರ್ಭಿಣಿ ಯಾದಳಂಗನೆಯು ॥
ಕೇಳು ಮುನಿಕುಲ ತಿಲಕ ಪೊಡವೀ।
ಪಾಲ ತನ್ನಾ ಪುರದ ಪರಮ ವಿ-।
ಶಾಲ ಸೀಮೆಯ ಸುಳಿದು ನಡೆಯುತ ವಿಪಿನ ಮಾರ್ಗದಲಿ ॥
ತಾಳುತಿರೆ ಬಹು ಕಷ್ಟಗಳ, ತಂ-।
ಗಾಳಿ ಪುಷ್ಪಾಸವದೊಡನೆ ಭೂ-।
ಪಾಲಕನ ಮೈ ಸೋಂಕೆ, ಸರಸಿಯ ಕಂಡನೆದುರಿನಲಿ ॥ ೧ ॥
ಕೊಳವೊ, ಮನಸಿಜನತಿ ವಿನೋದದಿ।
ಜಲ ವಿಹಾರಕೆ ಕಲ್ಪಿಸಿದ ತಂ-।
ಗೊಳವೊ, ಸುರನದಿಯುಗಮವೋ ಮೇಣ್ ಸೂರ್ಯ ಚಂದ್ರಮರು ॥
ಪಲವು ಬಗೆಯಿಂ ಪೊಗಳುತಿಹ ನಿ-।
ರ್ಮಲದ ಸೌಂದರ್ಯವನು ನೋಡ-।
ಲ್ಕಿಳಿಯೊಳಿಟ್ಟಹ ದರ್ಪಣವಿದೆನಲಿಸೆದುದಾ ಸರವು ॥ ೨ ॥
ಕುಪಥದೊಳ್ದಿನಪತಿಯ ಘನದಾ।
ತಪಕೆ ಕಾತರಗೊಂಡ ಮದ್ರಾ।
ಧಿಪನು ಪರಮಾನಂದದಿಂ ಮೀಯಲ್ಕೆ ಸರಸಿಯಲಿ ॥
ಅಪರಿಮಿತ ತೇಜೋ ವಿರಾಶಿಯ।
ತಪನ ತಾ ನಪರಾಬ್ಧಿಯಲಿ ಪೋ।
ದಪನೊ ಧರೆ ತಿರುಗದಲೆ ಯೆಂಬ ವೊಲೆಸೆವ ಪಡವಣದಿ ॥ ೩ ॥

---

(೧) ಆಸವ–ಮಕರಂದ. ಸೋಂಕು–ತಾಕು. ಸರಸಿ-ಸರೋವರ. (೨) ಮನಸಿಜ-ಕಾಮ. ಕೊಳ-ಸರೋವರ. ಸುರನದಿ–ಗಂಗಾನದಿ. ದರ್ಪಣ–ಕನ್ನಡಿ. (೩) ಕುಪಥ-ಕೆಟ್ಟಹಾದಿ. ಆತಪ-ಬಿಸಿಲು. ತಪನ-ಸೂರ್ಯ

ಪ್ರೋಗೆ ರವಿ ಪಡುವಣದಿ ನೃಪ ತಾ।
ನಾಗಲಾನ್ಹಿಕ ನಿಯಮಗಳ ನತಿ |
ಬೇಗದಿಂ ಪೂರೈಸುತಲಿ ಪದ್ಮಾಸನದಿ ಕುಳಿತು ॥
ನೀಗಿ ಕ್ಷುದೆ ತೃಷೆಗಳನು ನಿರ್ಮಲ-।
ನಾಗಿ ಹೃತ್ಪಟಲದೊಳು ಮೂರ್ತಿಯ |
ಜಾಗು ಮಾಡದೆ ನಿಲಿಸಿ *ಸ್ತುತಿಸಿದನಮಲ ಭಕುತಿಯಲಿ ॥ ೪ ॥

ಅಂಬೆ ವಿಶ್ವ ಕುಟುಂಬೆ ಭಕ್ತರ।
ಬೆಂಬಿಡದೆ ಕಾಯ್ವಂಬಿಕೆಯೆ ರವಿ-।
ಬಿಂಬ ತೇಜಳೆ ಪೊಂಬಸಿರನರ್ಧಾಂಗಿ ನೀನಿನ್ನು ||
ಹಂಬಲಿಪ ಪದ ದಾಸನನ್ನು ಪ-|
ರಾಂಬರಿಸಿ ಪೊರೆದೀಗ ನಿನ್ನ ಪ-।
ರಾಂಬಳೆಂಬಾ ಬಿರುದು ಕಾಯಲ್ಬೇಕು ಜವದೊಳಗೆ || ೫ ॥

ಕರುಣಿಪರೊಳತಿ ಕರುಣಿಪಳು ಯೆಂ-|
ದುರವಣಿಸಿ ತವ ಪಾದ-ಕಮಲಕೆ।
ಶರಣು ಪೊಕ್ಕಿಹ ಚರಣದಾಸನ ಮೇಲೆ ದಯದೋರಿ ॥
ಪೊರೆವವಳು ನೀನೆಂದು ಮನದಲಿ |
ಪರಮ ಧೃಡ ನಿಶ್ಚಯದಿ ನಂಬಿದೆ।
ಪೊರೆಯ ಬೇಕೌ ತಾಯೆ! ನಿನಗಪರಾಧಿ ನಾನಲ್ಲ ॥ ೬ ||

ಕಂದರಾನಂದದಲಿ ಗೆಳೆಯರ |
ವೃಂದದೊಳಗಾಡುತಿರೆ ಕೊರತೆಯು |
ಬಂದೊಡನೆ ರೋದಿಸುತ ತಾಯ್ಬಳಿಗೈದುವಂದದಲಿ ॥

---

(೪) ಕ್ಷುದೆ-ಹಸಿವು. ತೃಷೆ-ನೀರಡಿಕೆ. ಜಾಗು-ತಡ. (೫) ಅಂಬೆ-ತಾಯಿಯೇ. ವಿಶ್ವ-ಜಗತ್ತು. ಪೊಂಬಸಿರ-ಬ್ರಹ್ಮ. ಜವದೊಳಗೆ-ತೀವ್ರವಾಗಿ. (೬) ಉರವಣಿಸಿ-ಬೇಗಬಂದು. ಚರಣ-ಪಾದ.

ಬಂದುದೀ ಭವದಾಟದಲಿ ಘನ- ।
ಕುಂದು ಜನನಿಯಳೆನುತ ಚರಣಕೆ ।
ಬಂದ ನಂದನಗಿಂದು ದಯದೋರುವದದುಚಿತ ಕಣಾ! ॥ ೭ ॥

ಲಾಲಿಸೆಲೆ ವಿಧಿ ಸಂಭವನೆ ಭೂ- ।
ಪಾಲನಾ ಸಾವಿತ್ರಿಯಂ ಬಹು ।
ಕಾಲ ಪರ್ಯಂತರದಿ ಪರಿ ಪರಿ *ಸ್ತುತಿಸೆ ಭಕುತಿಯಲಿ ॥
ಕೇಳದಿರೆ ತನ್ನೊರಲ ಬಗೆಯಾ- ।
ನೀಲ ಲೋಚನೆಯಾಗ ಪೊಡವೀ ।
ಪಾಲನಾಚರಿಸಿದನು ವನದೊಳು ಘೋರತರ ತಪವ ॥ ೮ ॥

ಕೆಲವು ದಿನ ಗಿಡದೆಲೆಗಳಿಂದಲಿ ।
ಕೆಲವು ದಿನಗಳ ನೀರಿನಿಂದಲಿ ।
ಕೆಲವು ದಿನ ತೃಣ ತೊಗಟೆಯಿಂದಲಿ ಪೊರೆಯೆ ಜನ್ಮವನು ॥
ನಳಿನಜೋದ್ಭವನರಸಿ ಬರದಿರೆ ।
ಬಳಿಕ ಗಾಳಿಯನುಂಡು ಕೆಲದಿನ ।
ಕಳಿಯೆ ಭಕ್ತಿಗೆ ಮೆಚ್ಚಿ ಮೈದೋರಿದಳು ನಳಿನಾಕ್ಷೀ ॥ ೯ ॥

ಸೂಸಿದವು ಕಣ್ಣಿಂದಲಾನಂ- ।
ದಾಶ್ರುಜಲ ಕಂಧರವು ಬಹು ಸಂ- ।
ತೋಷದಿಂದುಬ್ಬಿದುದು ಕಂಡೊಡನವಳ ಸಿರಿ ಮೊಗವ ॥
ಗಾಸಿಯಾದತ್ಯುಗ್ರ ತಪದಾ ।
ಯಾಸವಡಗಿದುದಾಗ ನೃಪ ಪರಿ ।
ತೋಷದಿಂ ಸಿರವಾಗಿ ವಿನಯದಿ ನುಡಿವನಜ ಸತಿಗೆ ॥ ೧೦ ॥

---

ಕಣಾ-ಕಂಡೆಯಾ. (೮) ಒರಲು-ಕಷ್ಟದ ಕೂಗು. ಲೋಚನ-ಕಣ್ಣು. (೯) ತೃಣ-ಹುಲ್ಲುಕಡ್ಡಿ. ಮೈದೋರಿದಳು-ಕಂಡಳು. (೧೦) ಕಂಧರ-ಕೊರಳು. ತೋಷ-ಆನಂದ.

ಶಾಂತ ಮೂರುತಿ ಭವ ವಿಮೋಹದ ।
ಭ್ರಾಂತಿಗಳೆಯುವ ತನಯರಿಲ್ಲದೆ ।
ಪ್ರಾಂತ ಗಾಣದೆ ಬಳಲಿ ಬೆಂಡಾಗಿಹೆನು ಭವದೊಳಗೆ ||
ಸಂತತಿಯನುಳಿದೀ ಭವದಿ ವಿ- ।
ಶ್ರಾಂತಿ ಮತ್ತೇನಿಹುದು ಪೇಳಾ ।
ಸಂತತಿಯ ಭಿಕ್ಷಾರ್ಥಿ ಯಾಗಿಹೆನೆನಲು ಸಾವಿತ್ರೀ— ॥ ೧೧ ॥
ಧಾತ್ರಿಪತಿ ತವ ದೈವದೊಳು ಸ- ।
ತ್ಪುತ್ರ ಸಂತತಿ ಯಿಲ್ಲವಾದೊಡೆ ।
ಪುತ್ರಿಯೋರ್ವಳು ಪುಟ್ಟುವಳು ಕುಲ ಪಾವನವ ಮಾಳ್ಪ ॥
ಪಾತ್ರಳಪ್ಪಳು ಪೂಜೆಗೀ ಲೋ |
ಕತ್ರಯದಿ ಸರ್ವತ್ರರೋಳ್ ಸಾ |
ವಿತ್ರಿ ನಾಮಾಂಕಿತವನಿಡು, ಭಯ ಬೇಡ ನಿನಗಿನ್ನು ॥ ೧೨ ॥
ಹೆಣ್ಣು ಹುಟ್ಟುವದೆಂದೊಡನೆ ಮೊಗ ।
ಬಣ್ಣಗುಂದಿತು ನೃಪಗೆ, ಶಿವ! ಶಿವ!! |
ಹೆಣ್ಣಿಗಾಗಿಯೆ ವಿಪಿನದೊಳಗತಿ ತೊಳಲಿ ಬಳಲುತಲಿ ॥
ಮಣ್ಣುಗೂಡಿದೊಲಾಯ್ತು ದುಃಖದ ।
ಕಣ್ಣಿ ಬಿಡುಗಡೆಯಾಯ್ತು! ತಾಯಿಯೆ ।
ಹೆಣ್ಣು ಹುಟ್ಟಲಿ ಜೇಡ, ಲೋಕತ್ರಯದ ಮನುಜರಿಗೆ || ೧೩ ||
ಗರ್ಭದೊಳ್ನವ ಮಾಸ ಧರಿಸುತ ।
ಅರ್ಭಕತ್ವದಿ ಮೊಲೆಯುಣಿಸಿ ಘನ- ।
ದುಬ್ಬಿನಿಂದಲಿ ಪೊರೆದು ತಾಸುಣ್ಣುವದನದಕುಣಿಸಿ ||
ಕೊಬ್ಬಿಸುತ ಪರ-ಗೃಹಕೆ ಜವದೊಳು ।
ದಬ್ಬಿಬಹ ತಾಯ್ತಂದೆಗಳ್ ಮ- |
ತ್ತೊಬ್ಬರಾಗಲಿ ಬೇಡವೆನಲವಳೆಂದಳರಸಂಗೆ ॥ ೧೪ ॥

---

(೧೧) ಭವ-ಸಂಸಾರ. ಪ್ರಾಂತಗಾಣದೆ-ಕಡೆಗಾಣದೆ. (೧೨) ಧಾತ್ರಿ-ಭೂಮಿ. ಪಾವನ-ಪವಿತ್ರ. (೧೪) ಅರ್ಭಕತ್ವ-ಬಾಲತ್ವ.

ಆರು ಪಡೆದರು ನಿನ್ನ? ಮತ್ತಿ- ।
ನ್ನಾರು ಪೊರೆವರು ಮೊಲೆಯುಣಿಸಿ? ಪೇ- ।
ಳಾರು ಪಡೆಯುವರೀಗ ನಾ ಕೊಟ್ಟೊಡೆ ಸುಪುತ್ರಸನು ? ॥
ನಾರಿಯಿಂ ಕುಲ-ಕೋಟಿ-ಜನರು- ।
ದ್ಧಾರರಪ್ಪರು ಸಾಧ್ವಿಯಾದೊಡೆ, ।
ದಾರಿದಪ್ಪಿದ ನಾರಿ ವಂಶದ ಮಾರಿಯಪ್ಪುವಳು. ॥ ೧೫ ॥

ಪರರ ಮನೆಗೀಡಾಗ್ವಳೆಂದತಿ ।
ಮರುಗಬೇಡೆಲೆ ನೃಪನೆ; ರಣ ವೀ- ।
ರರನು, ದೇಶೋದ್ಧಾರರನು ಪಡೆಯುವ ಮಹಾ ಜನನೀ ॥
ಇರದೆ ತಾನಪ್ಪುವಳು ಮಗಳೆಂ- ।
ದರಿತು ಮನದಿ ವಿಕಲ್ಪನಾಂಕುರ ।
ತರದೆ ನಡಿ, ಯನ್ನಾಂಶದೋಳ್ಪುಟ್ಟುವಳು ಮಗಳಿನ್ನು ॥ ೧೬ ॥

ಎಂದೊಡನೆ ನೃಪ ನೌಳಿ ಪರಮಾ ।
ನಂದದಿಂದೊಪ್ಪುತಲೆ,— ತಾಯಿಯೆ ।
ಬಂದ ಭಯವೇತರದು ನಿನ್ನಯ ಕೃಪೆಯಿರಲು ಯೆನಗೆ ॥
ಮಂದ ಬಾಲನ ತಪ್ಪು ತಡೆಗಳ ।
ನೊಂದನೆಣಿಸಲ್ಬಹದೆ ಜನನಿಯು ।
ಯೆಂದು ಚರಣಕ್ಕೆರಗಿ ಸ್ತುತಿಸಿದ ನಮಲ ಬಕುತಿಯಲಿ ॥ ೧೭ ॥

ಜಯ ಜಯತು ಜಗದಂಬೆ ಜಯ ಜಯ ।
ಜಯ ಜಯತು ಶಶಿಬಿಂಬೆ ಜಯ ಜಯ ।
ಜಯ ಜಯತು ಕರುಣಾಂಬೆ ಜಯಜಯ ಜಯತು ಜಯಜಯತು॥

---

(೧೫) ಪಡೆವರು-ಹಡೆದರು. ಸಾಧ್ವಿ-ಪತಿವ್ರತಾಸ್ತ್ರೀ. ಅಪ್ಪು-ಆಗು. (೧೬) ಇರದೆ. ಬಿಡದೆ. ವಿಕಲ್ಪನೆ-ಕೆಟ್ಟ ಆಲೋಚನೆ. (೧೭) ಮಂದ-ದಡ್ಡ. (೧೮) ಶಶಿಬಿಂಬೆ- ಚಂದ್ರನಂತೆ ಶಾಂತವಾದ ಕಾಂತಿಯುಕ್ತಳೇ. ಸುಕ ದಂಬೆ-ಸುಗಂಧಯುಕ್ತಳೇ.

ಜಯತು ವಿಶ್ವ ಕುಟುಂಬಿ ಜಯ ಜಯ ।
ಜಯ ಜಯತು ಸುಕದಂಬಿ ಜಯ ಜಯ ।
ಜಯಜಯತು ಭಕ್ತಾಭಿಮಾನಿಯೆ ಜಯತು ಜಯಜಯತು॥ ೧೮ ॥

ಕೇಳು ವಿಧಿ ಸಂಭವನೆ ಕರುಣಾ ।
ಶಾಲಿ ನೃಪ ಪರಿ*ಸ್ತುತಿಸಿ ಮೇಲ- ।
ಕ್ಕೇಳುವನಿತರೊಳವಳು ತೋರದಲಿರಲು ಬಹು ಮರುಗಿ ॥
ಆಲಯಕೆ ಪೊರಮಟ್ಟು ತನ್ನ ವಿ- ।
ಶಾಲ ಸೀಮೆಯೊಳೈದಿದೊಡೆ ಜನ ।
ಜಾಲ ಮುಸುಕಿತು ಮೊಳಗಿದವು ಜಯ ಭೇರಿ ವಾದ್ಯಗಳು ॥ ೧೯ ॥

ಹರಿಣ ಲೋಚನೆ ತನ್ನ ಮನವನು ।
ಹರಿಬಿಡದೆ ಭಾಗ್ಯದೊಳು ನಿತ್ಯದಿ ।
ಹರಿಪತಿಯ ಧ್ಯಾನದೊಳು ಕಾಲವ ಕಳೆಯುತಿರಲಾಗ ॥
ಹರಿ ಸತಿಯ ಮೆಚ್ಚಿಸಲು ಪೋಗಿಹ ।
ಹರಿರುಹಾಕ್ಷನ ಬರುವ ಕೇಳುತ ।
ಹರಿಗಮನೆ ಮುಳುಗಿದಳು ಪರಮಾನಂದ ಜಲಧಿಯೊಳು ॥ ೨೦ ॥

ಬರುವ ಹಾರೈಸುತಲೆ ತನ್ನಯ ।
ಚರಣದಾವುಗೆಗಳನು ಪೂಜಿಪ ।
ತರುಣಿ ತಾನೆಷ್ಟೊರಲುವಳೊ ಕೊರಗಿಹಳೊ! ಮನದೊಳಗೆ ॥
ಪರಮ ವ್ರತದೊಳಗೆಷ್ಟು ಕಾಯವ ।
ಸುರಿಸಿ ಕಳೆಗುಂದಿಹಳೆನುತ ನೃಪ ।
ಬರಲು ತನ್ನಂತಃಪುರಕೆ, ರವಿ ಪೋದ ಪಡವಣದಿ ॥ ೨೧ ॥

---

[ ಅನುಕ್ರಮವಾಗಿ ಹರಿ ಶಬ್ದಾರ್ಥವು ] (೨೦) ಹರಿಣ-ಚಿಗರೆ. ಹರಿಬಿಡದೆ-ಹೋಗಗೊಡದೆ. ಹರಿಪತಿಯ-ಅಶ್ವಪತಿಯೆ. ಹರಿಸತಿಯ-ಸಾವಿತ್ರಿಯ ಹರಿರುಹ-ನೀರಿನಲ್ಲಿ ಹುಟ್ಟಿದ್ದು ಕಮಲ. ಹರಿಗಮನೆ-ಆನೆಯಂತೆ ಮೆಲ್ಲಗೆ ನಡೆಯುವ ಅರಸಿಯು. (೨೧) ಹಾರೈಸು-ಅಪೇಕ್ಷಿಸು. ಆವುಗೆ-ಪಾದುಕೆ.

ಬಂದೊಡನೆ ಚರಣದ್ವಯಕೆ ಸಂಯ ।
ದಿಂದ ನಸು ಲಜ್ಜೆಯ ಸುಹಾಸ್ಯದಿ ।
ವಂದಿಸಿದ ವರ ಕೋಮಲಾಂಗಿಯನಪ್ಪಿದೊಡೆ ತಪದಿ ॥
ಕುಂದಿದೀರ್ವರ ಕಾಯ ಪರನಾ ।
ನಂದದಿಂದುಬ್ಬಿದುದು ಪೇಳ- ।
ಲ್ಸಂದಿಹುದೆ ಪರಮಾತ್ಮನಾ ಭವ-ಮೋಹ ಜಾಲವನು ॥ ೨೨ ॥
ಎಸೆದನಾಸಮಯದೊಳು ಮನಸಿಜ ।
ಮಿಸುಪ ಪೂ-ಕೂರ್ಗಣೆಗಳಿಂ ನೆರೆ ।
ಮಸೆದು ತರುಣರ ನದರ ಘಾತಿಗೆ ವ್ಯೈ ಮರೆದು ಜವದಿ ॥
ವಸುಧೆಗುರುಳುವ ತೆರದಿ ಮಂಚದ ।
ಮಿಸುಪ ತಲ್ಪದೊಳೊರಗಿ ಕಳೆದರು ।
ಕುಸುಮ-ಶರ-ಲೀಲಾ-ವಿನೋದದೊಳಂದು ರಾತ್ರಿಯನು ॥ ೨೩ ॥
ಕಳಿಯೆ ಕೆಲದಿನವನಿತರೊಳ್ನವ ।
ನಳಿನಪತ್ರಾನನೆಯು ಗರ್ಭವ ।
ತಳೆಯಲತ್ಯಾನಂದದೋಳ್ ಮುಳುಗಿದುದು ಸಕಲ ಜನ ॥
ಅಳಿಸುವವರಾರುಂಟು ವಿಧಿಸತಿ ।
ಯಳ ವರವ ಭೂಮಂಡಲದಿ ಶಿಶು ।
ಬಳೆಯಲಾರಂಭಿಸಿತು ಗರ್ಭಾಂಬುಜದಿ ದಿನ ದಿನಕೆ ॥ ೨೪ ॥



ಇತಿ ಶ್ರೀ ಕವಿಕಿಂಕರ ತೊರವೆ ರಾಘವಾಂಕ ಕವಿ ವಿರಚಿತ

**ಸತಿ ಸಾವಿತ್ರಿ ಮಹಾತ್ಮೆಯೋಳ್ ತ್ರಿತಿಯೋಧ್ಯಾಯ**

ಪದ ೮೦ ಕ್ಕೆ ಮಂಗಲಮಸ್ತು.

(೨೨) ದ್ವಯ- ೨. (ಜೋಡು) ಸಂದಿಹುದೆ-ಸಾಧ್ಯವಿರುವದೆ. (೨೩) ಮನಸಿಜ-ಕಾಮ. ಮಿಸುಪ-ಶೋಭಿಸುವ. ಪೂಕೂರ್ಗಣೆ-ಹದನವಾದ ಹೂಬಾಣ. ತಲ್ಪ-ಹಾಸಿಗೆ. (೨೪) ತಳೆಯಲು-ಧರಿಸಲು.

## -:ಅಥ ಚತುರ್ಥೋಽಧ್ಯಾಯಃ:-

ಸ. ಸೂ. ಪ.॥ ಗರ್ಭವಾಸವನುಳಿದು ಕಳೆಯುತ।
ಲರ್ಭಕತ್ವವ ಲೀಲೆಯಿಂ ಮಿಗೆ।
ಯಬ್ಬರಿಸೆ ಯೌವನವು ಕೊರಗಿದಳಾಗ ಸಾವಿತ್ರೀ ||
ಕೇಳಿಲೈ ವಿಧಿಸಂಭವನೆ ಭೂ-।
ಪಾಲನರಸಿಯು ಗರ್ಭ-ಲಾಂಛನ |
ದೇಳಿಗೆಯ ನಿರುಪಮದ ಶುಭಕಾಂತಿಯಲಿ ಶೋಭಿಸುತ ॥
ತಾಳುತಲೆ ಮುಗ್ಧತೆಯ ಭಾಗ್ಯ ವಿ-।
ಲೋಲದಲಿ ಮನವಿಡದೆ ಕೆಳದಿ ಜ-|
ನಾಳಿಯರ ನಗೆನುಡಿಯ ನಾಲಿಸದಿರಲು ದಿನದಿನಕೆ ॥ ೧ ॥
ಧರಿಸಿದುದು ಧವಲತೆಯ ಮೊಗ-ದಾ-।
ವರೆಯು, ಕೊಬ್ಬಿದುದಮಲ ಕಾಯವು |
ಸರಿದವೀಕ್ಷಣಗಳೊಳಗೆ, ಕಾರ್ದೊಡೆದವು ಕುಚಾಗ್ರಗಳು ॥
ತರತರದ ಬಯಿಕೆಗಳು ಪುಟ್ಟಿದ- |
ವರಸಿ ಮನದೊಳು, ವಂಶ-ಪಾವನ।
ಕರ ಕುವರಿ ಪೆರ್ಚುತಿರೆ ಗರ್ಭಾವಾಸದೊಳು ಭರದಿ || ೨ ||
ಪೇಳಿದಿಚ್ಛೆಯ ನಿತ್ತನಾ ಭೂ-।
ಪಾಲ ನತ್ಯಾನಂದದಿಂ ಬಹು।
ಕಾಲ ಪರ್ಯಂತರದಿ ಮಕ್ಕಳು ಮಕ್ಕಳಿಂದೊರಲಿ ॥
ಕಾಲ ಗತಿಯಿಂದೇಸು ಪುಣ್ಯದೊ-।
ಳಾ ಲತಾಂಗಿಯು ಗರ್ಭ ತಳೆದಿರೆ |
ಪೇಳಲೇನಾಶ್ಚರ್ಯವಿಹುದಿದರೊಳಗೆ ತಿಳಿಯಲ್ಕೆ ॥ ೩ ॥

---

ಸೂ) ಕೊರಗು-ಸೊರಗು. (೧) ಕೆಳದಿ-ಗೆಳತಿ. (೨) ಧವಲ-ಬಿಳಿದು ಕೊಬ್ಬು-ಸೊಕ್ಕು. ಅಮಲ-ಸ್ವಚ್ಛ. ಕಾಯ-ದೇಹ. ಈಕ್ಷಣ-ಕಣ್ಣು. ಕಾರ್ದೊಡೆದವು-ಕಪ್ಪಾದವು. ಕುಚಾಗ್ರ-ಮೊಲೆಯ ಮೂಗು. ಪಾವನ-ಪವಿತ್ರ. ಪೆರ್ಚುತಿರೆ-ಬೆಳೆಯುತ್ತಿರಲು. ಆವಾಸ-ಮನೆ.

ಅರೆ ನಿಮಿಷದಂದದಲಿ ತುಂಬಿದ- |
ವರಸಿಗಾ ನವ ಮಾಸ ಮದರೊಳು ।
ಪರಮ ವೃದ್ಧಾಚಾರಗಳ ಪೂರೈಸಿದರು ಬಿಡದೆ ॥
ಇರಲಿನಿತು ಸುಮುಹೂರ್ತದೋಳ್ಜು- ।
ವರನ ಸತಿ ಪೂರ್ಣೇಂದು ನಿಭಳಹ |
ತರಳೆಯನು ಪಡೆದಳು ಶುಭೋದಯವಾಯ್ತು ಮೂಜಗಕೆ ॥ ೪ ॥
ಹರುಷವಿಮ್ಮಡಿಸಿದುದು ತದ್ಭೂ |
ವರ ಮೊದಲುಗೊಂಡಖಿಲ ಜನಕಾ |
ಸರಸಿಜಾಳಿಗೆ ಬಾಲ ರವಿ ಪುಟ್ಟಿದವೊಲಂಬರದಿ ||
ಸುರರು ಪೊಸ ಪೂ-ರಾಸಿಯಿಂ ಮಳೆ ।
ಗರೆದರಾಗುತ್ಸವದಿ ಸಲೆ ಸಿಂ- ।
ಗರಿಸಿದರು ನವತೋರಣಂಗಳ ಕಟ್ಟುತಾ ಪುರವ ॥ ೫ ॥
ಭೂಸುರರ ಮನದಿಷ್ಟವನು ಪೂ ।
ರೈಸಿದೊಡನಾ ದಿನದಿ ಬಹು ಸಂ- |
ತೋಷದಿಂದುಚ್ಚಸ್ವರದಿ ಪರಿಸುತಲೆ ಬಗೆ ಬಗೆಯ ||
ಸೋಸಿನಿಂದುಬ್ಬುತಲೆ ಜಟೆಯನು ।
ಬೀಸುತೆಮಗಿನ್ನಾರು ಸಮರಿಂ- ।
ದೀ ಸುರಾಜ್ಯದೊಳೆನುತ ಸಾಗಿದುವಲ್ಲಿ ದ್ವಿಜ ನಿಕರ ॥ ೬ ॥
ಪೋಗಲಿನಿತೀರೈದೆರಡು ದಿನ |
ವಾಗ ಶಿಷ್ಟಾಚಾರ ನಿಯಮದಿ ।
ತೂಗಿದರು ಸಾವಿತ್ರಿ ನಾಮವನಿಟ್ಟು ಹದುಷದಲಿ ॥
ನಾಗವೇಣಿಯರಂದು ಮಣಿಮಯ ।
ವಾಗಿರುವ ಪೊಂದೊಟ್ಟಿಲಲಿ ತಲೆ ।
ದೂಗಿದರು ನೃಪ ಸುತೆಯ ವೈಭವಕಂದು ಸುರರಿರದೆ ॥ ೭ ॥

---

(೪) ನಿಭ-ಸಮಾನ. ತರಳೆ-ಹುಡಿಗೆ. (೫) ಇಮ್ಮಡಿ-ಎರಡು ಪಟ್ಟು. ಸಿಂಗರಿಸು-ತ್ಸ. ಶ್ರಿಂಗರಿಸು. (೬) ಭೂಸುರರು-ಬ್ರಾಹ್ಮಣರು. (೭) ಈರೈದು-೧೦

ಬಾಲ ಚಂದಿರನಂದದೊಳಗಾ।
ಬಾಲಿಕೆಯು ಬೆಳೆಯುತಲಿ ಬಹುವಿಧ।
ಬಾಲ ಲೀಲೆಗಳಿಂದ ತಾಯ್ತಂದೆಗಳ ಮನವೊಲಿಸಿ ||
ಲಾಲನಂಗೊಳುತೆಲ್ಲ ಸತಿ ಜನ |
ಜಾಲಕತಿ ಮುದ್ದಾಗಿ ಲಕ್ಷ್ಮೀ।
ಲೋಲನಂತಃಕರುಣದಿಂದಿರುತಿರ್ದಳರಸಿಯಲಿ ॥ ೮ ॥

ವರುಷವೈದಾಗಲ್ಕರಸಿ ನಿಜ।
ತರುಳೆಯಳ ಗೃಹಶಿಕ್ಷಣಕೆ ಕ।
ಣ್ದೆರೆದು ಲಾಲನೆ ಪಾಲನೆಯೊಳರುಹಿದಳು ದೇಹವನು ॥
ಪೊರೆಯಲತಿ ನಿರ್ಮಲದಿ— ಯುಣ್ಣುವ।
ಪರಿಯ, ಪೇಯ ಪದಾರ್ಥಗಳ ಬಂ-।
ಧುರ ಗುಣಾವಗುಣಂಗಳನು, ತನುಜಾತೆಗನುಭವದಿ ॥ ೯ ॥

ಪೇಳಿದಳು ಸತ್ಕಥೆಯ, ಲಕ್ಷ್ಮೀ।
ಲೋಲನಮಿತ ಗುಣಾವಳಿಯ, ಸತಿ–।
ಜಾಲದನಘ ಮಹಾತ್ಮೆಯನು, ಶಿಶು ಪೋಷಣಕ್ರಮವ ॥
ಕಾಲ ಋತುಗಳ ನಾಶ್ರಿತರ ಪರಿ।
ಪಾಲನೆಯ, ಸತ್ಸಂಗ ಫಲವ, ಸ–।
ಕಾಲದಲಿ ಯಷ್ಟಾಬ್ದ ಪರ್ಯಂತರದೊಳಾತ್ಮಜೆಗೆ ॥ ೧೦ ॥

ಪೋಗಲಷ್ಟಾಬ್ದಗಳು ವಾಲವಿ।
ಯಾಗ ಪತಿಸಮ್ಮುಖದಿ— ತನುಜೆಯ।
ನೀಗ ಕಳುಹುದು, ಕುಲಗುರುಗಳಾಂಗನೆಯರಾಶ್ರಮಕೆ ॥
ತಾಗಿ ಸತ್ಸಂಗತೆಯ, ವಿದ್ಯಾ।
ಭಾಗಿಯಳ್ತಾನಾಗಿ ಬರಲೆ– |
ಮ್ಮೀ ಗೃಹಕೆ, ಪನ್ನೆರಡು ವರುಷದೊಳೆಂದೊಡವನೀಶಾ— ॥ ೧೧ ॥

---

(೯)ಗೃಹಶಿಕ್ಷಣ–ಮನೆಗೆಲಸಗಳನ್ನು ಸುರಳೀತನಡೆಸಲು ಕಲಿಸುವವಿದ್ಯೆ(೧೦
ಅಷ್ಟಾಬ್ದ– ೮ ವರ್ಷ. (೧೧) ಸಮ್ಮುಖ–ಎದುರಿಗೆ. ತಾಗಿ–ಹೊಂದಿ.

ಒಳಿತು ಪೊಗಲಿ; ಸಾಧು ಸಜ್ಜನ।
ರಳವಿನೊಳಗಿದ್ದ ಮಿತ ಪುಣ್ಯವ।
ಗಳಿಸಿ ಪಡೆಯಲಿ ಪುಣ್ಯವಂತಾಣ್ಮನನು ಮಗಳೆಂದು॥
ಘಳಿಲನಾ ಕುಲ-ಗುರುಗಳನು ಕರೆ।
ಕಳುಹಿ ತನುಜೆಯನೊಪ್ಪಿಸಿದ ನಿ-।
ರ್ಮಲ ಮನದೊಳವರಂಘ್ರಿ ಕಮಲಕೆ ಮುನಿಪ ಕೇಳೆಂದ ॥ ೧೨ ॥
ಇರುವಳಾಗುರು ಬಾಲಿಕೆಯ ರೊ-।
ಗ್ಗರಿಕೆಯಲಿ ಯವರೊಡನೆ ಸೇವಿಸು-।
ತಿರುವಳಾಡುವ ಳುಂಡು ಮಲಗುವ ಳರಸು ಮಗಳೆಂಬ॥
ಗರುವವಿಲ್ಲದೆ ಯಖಿಲ ವಿದ್ಯೆಯ।
ದೊರಕಿಸುತ ಪನ್ನೆರಡು ವರುಷಾಂ।
ತರವ ಕಳೆದೈದಿದಳು ಜನನೀ-ಜನಕರಾಲಯಕೆ ॥ ೧೩ ॥
ಕೇಳೆಲೈ ಮುನಿನಾಥ ನೃಪಸತಿ।
ಮಾಲವಿಯು ಸದ್ಬೋಧನೆಗೆ ಸ-।
ತ್ಕಾಲ ಸಮನಿಸಿತೆಂದು ಸತಿಧರ್ಮವ ಮಹಾತ್ಮೆಯನು॥
ಪೇಳಲಾರಂಭಿಸಿದಳಾಗ ಸ-।
ಮೂಲವಾಗಿ ಪತೀಚ್ಛೆಯಂತೆ ಸ-।
ಕಾಲದಲಿ ಸೇವಿಸುವ ಪರಮೋ ಧರ್ಮದಿಂಗಿತವ ॥ ೧೪ ॥
ಮೀರದಲೆ ಯಾಜ್ಞೆಯನು, ಪರರೊಳು।
ಜಾರದಲೆ, ಮುನಿಸಿನೊಳು ವೈರವ।
ತೋರದಲೆ, ಹಿತ-ಶತೃಗಳ ಸವಿನುಡಿಯ ಮನಸಿನೊಳು॥
ತಾರದಲೆ, ಗೃಹ-ಛಿದ್ರ ವಾಕ್ಯವ।
ಸಾರದಲೆ, ಕಷ್ಟದೊಳು ಕಂಬನಿ।
ದೋರದಲೆ, ಪತಿದೇವನಂಕಿತಳಾಗು ನಳಿನಾಕ್ಷೀ ॥ ೧೫ ॥

---

(೧೨) ಅಳವಿನೊಳಗೆ–ಅಂಕಿತದಲ್ಲಿ. ಘಳಿಲನೆ–ಕೂಡಲೆ. (೧೩) ಒಗ್ಗರಿಕೆ–ಗುಂಪು. (೧೫) ಮುನಿಸು–ಸಿಟ್ಟು. ಸಾರದಲೆ–ಹೇಳದಲೆ.

ಈ ತೆರದಿ ದಿನದಿನಕೆ ವಾಲವಿ ।
ಯಾ ತಳೋದರಿಗರುಹಿ ಬಳಿಕ ಸ- ।
ನಾತನದ ವರ ಪಾಕಶಾಸ್ತ್ರವನನುಭವಗಳಿಂದ ||
ಪ್ರೀತಿಯಿಂ ಪೇಳುತಲಿ ಸೌಖ್ಯಾ |
ತೀತದಿಂ ಬಳೆಸಿದಳು ತನು ಸಂ- ।
ಭೂತಳನ್ನನಿತರೊಳು ನವ ಯೌವನವದಾಗಮಿಸೆ || ೧೬ ||

ತುಂಬವವು ಸರ್ವಾಂಗಗಳ್ಗಲಿ |
ಯಂಬುಜಾಕ್ಷಿಗೆ ದಿನ ದಿನಕೆ ಮನ- ।
ದುಂಬಿ ಸಮುಚಿತ ಪತಿಯ ಹೃತ್ಕಮಲವನು ದೊರಕಿಸಲು ||
ಮುಂಬರಿದುದಂಗಜನು ನಿಜ ಕೂ ।
ರಂಬುಗಳ ಸನ್ನಾಹದಿಂ ವಿಧು ।
ಬಿಂಬ ಮುಖಿಗೆದುರಾದನೆಲೆ ಚಿತ್ತೈಸು ಮುನ್ನುಡಿಯ || ೧೭ ||

ಅನ್ನ ಪಾನದೊಳಿಚ್ಛೆ ಗೆಟ್ಟಾ- ।
ಪನ್ನದಿಂ ಕೊರಗುತಲೆ ಸರಸದಿ |
ತನ್ನ ಕೆಳದಿಯ ರೊಡನೆ ಮಾತಾಡದಲೆ ನಗೆ ಮೊಗದಿ ||
ಮುನ್ನಿನಂತಿರದಾದರವ ನೆರೆ ।
ಮನ್ನಿಸದೆ ಧಿಃಕ್ಕರಿಸಿ ನೃಪಸುತೆ ।
ಬನ್ನ ಬಡುತಿರೆ ಮದನ ಶರದುರುಬೆಯಲಿ ದಿನದಿನಕೆ || || ೧೮ ||

ಉರಿವ ಪಾವಕನೊಳಗೆ ತೈಲವ |
ಸುರುವಿದೊಲು ಸು ವಸಂತ ಋತು ಬಂ- ।
ದೆರಗಿದುದು ಸಾವಿತ್ರಿ ನಕ್ಷತ್ರದೊಳು ಬಂದಂತೆ ||
ಧರಣಿಯನು ಮುಸುಕಿರ್ದ ಹಿಮ ತಾ ।
ತೆರಳಿದುದು ಸದ್ದಿಲ್ಲದಲೆ ಬಾ- ।
ಯ್ದೆರೆದು ಕೂಗಿದವಾಗ ಕೋಕಿಲೆಗಳು ಸು ನಾದದಲಿ || ೧೯ ||

---

(೧೬) ತಳೋದರಿ-ಸ್ತ್ರೀ.(ಮಗಳು). (೧೭) ತುಂಬಿ-ಗುಂಗೀಹುಳ. (೧೮) ಉರುಬೆ–ಸಂಕಟ (೧೯) ಪಾವಕ–ಬೆಂಕಿ. ತೈಲ-ಎಣ್ಣೆ.

ನಡುಗಿದೆವು ಹೇಮಂತ ಭೂಮಿಪ।
ನೊಡೆತನದೊಳೀರೆರಡು ತಿಂಗಳು।
ಪಡೆವನೀ ಭೂ-ಚಕ್ರವನು ಸುವಸಂತ ನೃಪ ತಾನು॥
ಕೊಡವುದವಗೀ ಕಾಣಿಕೆಯ ನಿ-।
ರ್ಜೋಡಿವೆಗಳ ನೆಂದಖಿಲ ಭೂರುಹ।
ಪಿಡಿದವೆನೆ ಪೂ-ಫಲಗಳನು ಪೊಸವಸ್ತ್ರಗಳ ಧರಿಸಿ ॥ ೨೦ ॥
ಲಾಲಿಸೆಲೆ ಮುನಿ ತಿಲಕ ಯೌವನ।
ಬಾಲಿಕಾಂಗನೆಯರು ವಸಂತದ।
ಕಾಲದಲಿ ಕಂಗೆಟ್ಟು ವಿರಹಾಗ್ನಿಯೊಳು ಪತಿಯೊಡನೆ॥
ಲೋಲವಾಡಿದರಾದಡೆಯು ಭೂ-।
ಪಾಲ ತನುಜೆಗೆ ತಕ್ಕ ವರ ನೃಪ-।
ಜಾಲದಲಿ ತಲೆ ದೋರದಿರೆ, ಕೃಶಳಾದಳಬುಜಾಕ್ಷೀ ॥ ೨೧ ॥
ನೋಡಿದನು ವಸುಧೀಶ ತನುಜೆಯ।
ಬಾಡಿ ಬಳಲಿದ ಕಾಯವನು, ಮಾ-।
ತಾಡಿಸಿದ ಸತಿ ಮೋಹದಲಿ ಮೈದಡವಿ ನಸು ನಗುತ॥
ಬೇಡು ಮನದಿಷ್ಟವನು, ಕೊರಗಿಸ।
ಬೇಡ ದೇಹವ ಭಾಗ್ಯ-ಲಕ್ಷ್ಮಿಯೊ-।
ಲಾಡು; ಚಿಂತೆಯದೇತಕೆನಲೆಂದಳು ಸುನಳಿನಾಕ್ಷೀ ॥ ೨೨ ॥
ತಾತ ನೀನಿನಿತೆನಗೆ ಪೇಳ್ವುದು।
ನೀತಿಯಪ್ಪುದೆ ಜಗಕೆ? ತವ ತನು-।
ಜಾತಳಿರೆ ಕೊರತೆಗಳಿಗಾಸ್ಪದ ಮುಂಟೆ? ಪೇಳಲ್ಕೆ॥
ಭೀತಿ ಯೆನಗೇನುಂಟು ಕೊರಗಿದ।
ಮಾತು ಪುಸಿ; ನೀನಿದಕೆ ಮನದೊಳು।
ಕಾತರಿಸ ಬೇಡಿನ್ನು ಸುಖಿ ಯಾಗಿರ್ಪೆನನು ದಿನದಿ ॥ ೨೩ ॥

ಇತಿ ಶ್ರೀ ಕವಿಕಿಂಕರ ತೊರವೆ ರಾಘವಾಂಕ ಕವಿ ವಿರಚಿತ

**ಸತಿ ಸಾವಿತ್ರಿಮಹಾತ್ಮೆಯೋಳ್ ಚತುರ್ಥೋಽಧ್ಯಾಯ**

ಪದ ೧೦೩ ಕ್ಕೆ ಮಂಗಲಮಸ್ತು.

# -:ಅಥ ಪಂಚಮೋಽಧ್ಯಾಯ:-

ಸಂ. ಸೂ. ಪ॥ ನೋಡಲೈದಾ ನೃಪರು ನಿಜ ಮುಖ |
ನೋಡದಲೆ ಶಿರವಾಗಲೀ ಬಗೆ |
ನೋಡಿ ಕೋಪಿಸಿ ಹೊರಟಳವನಿಯೊಳಾಣ್ಮನಾರ್ಜನೆಗೆ॥
ಕೇಳಜಾತ್ಮಜ ಶಶಿಮುಖಿಯು ಭೂ- |
ಪಾಲಗೀಪರಿ ನುಡಿದೊಡನೆ, ಸತಿ |
ಯಾಲಯಕೆ ಬಂದವನಿಪತಿ ಬೆಸಗೊಳಲು ಮಾಲವಿಯು— ॥
ಬಾಲಿಕೆಗೆ ನವ ಯೌವನದ ಸ-।
ತ್ಕಾಲ ಸಮನಿಸಿತುಚಿತ ಪೊಡವೀ।
ಪಾಲಕರೊಳೋರ್ವನ ಪದಕೆ ಯೊಪ್ಪಿಸುವುದಿನ್ನೆನಲು ॥ ೧ ॥
ನಿಜವು ಬಂದಿಹುದೀಗಲೆನ್ನಾ-।
ತ್ಮಜೆಗೆ ನವ ಯೌವನವದಾದೊಡೆ।
ಸೃಜಿಸಿಹನೊ ಸರಿಯಾದ ಸುಂದರ ಭೂಮಿ ಪಾಲಕರ॥
ತ್ರಿಜಗದಲಿ, ಮೇಣ್ ಬಹನೊ ಸತಿ ಯಂ-।
ಶಜಳಿಹಳು ಭೂಲೋಕದೊಳಗೇ-।
ದಜನು ತಿಳಿಯದಿದೆನಗೆನಲು ನೃಪ ನೆಂದಳಬುಜಾಕ್ಷೀ ॥ ೨ ॥
ಇನಿತು ಜಪಿಸುತಲಿರ್ದೊಡಾ ಮಾ-।
ನಿನಿಯ ಗತಿ ಯೇನೆಮ್ಮ ಕಾರ್ಯ-।
ಕ್ಕನುಚಿತವೆ ತಿಳಿಸುವದು ಕನ್ಯೆಯಳಿಹಳೆನುತ ಜಗಕೆ ? ||
ಮನಸಿಜವ್ಯಥೆಯೊಳಗೆ ಕುಮುದಾ।
ನನೆಯ ಕೊರಗಿಸುತಿಹುದದುಚಿತವೆ? |
ಜನನಿ ಜನಕರ್ಗೆನಲು ಬೆಸಸಿದನಂತು ಸಚಿವನಿಗೆ ॥ ೩ ॥
ದೊರೆತೊಡನೆ ದಿಗ್ದೆಸೆಯೊಳಿಹ ಭೂ-।
ವರರಿಗಾಲಿಖಿತಗಳು ಪರಮೋ-।
ತ್ಕರುಷದಿಂದುಬ್ಬುತಲೆ ವಿವಿಧಾಭರಣ ವಸ್ತ್ರಗಳ॥

---

ಸೂ.) ಆಣ್ಮನಾರ್ಜನೆಗೆ-ಗಂಡನನ್ನು ಸಂಪಾದಿಸಲಿಕ್ಕೆ. (೨) ಸೃಜಿಸು-ಹುಟ್ಟಿಸು. (೩) ಬೆಸಸಿದನು-[ಎಲ್ಲ ನೃಪರಿಗೂ ಪತ್ರಕಳುಹಲು]ಹೇಳಿದನು

ಧರಿಸಿ ಹುರಿಮಾಡುತಲಿ ಮೀಸೆಯ |
ನೆರೆದರಾ ಮದ್ರಾಧಿಪನ ಮಂ- ।
ದಿರದಿ ಮನಗೊಟ್ಟಾಲಿಸೆಲೆ ಮುನಿ ವೌಳಿ ಮುಂಗಥೆಯ ॥ ೪ ॥
ತಿದ್ದುವರು ಕೆಲರಾಗ ಮೀಸೆಯ- ।
ನೆದ್ದು ತೊಡವನು ಸರಿಸುವರು ಕೆಲ- ।
ರಿದ್ದರೆಮಗಿನ್ನೇನು ಗತಿಸಿಹುದೀಗ ಲಾಯುಷದ ॥
ಅರ್ಧ ಭಾಗವು, ಕೊಡಲಿ ಬಿಡಲೆಂ- ।
ದಿರ್ದರವರೊಳು ಕೆಲಬರಿಂತೆಸೆ ।
ದಿರ್ದ ಸಮಯದೊಳಶ್ವಪತಿ ಬಂದನು ಸಭಾಸ್ಥಲಕೆ ॥ ೫ ॥
ಸಾವರಿಸಿ ಕೊಂಡೆದ್ದು ಬಂದೊಡೆ ।
ಮಾವ ನಾಗುವನಿವನೆನುತ ಸ- ।
ದ್ಭಾವದಿಂ ಸಾಷ್ಟಾಂಗವೆರಗುವರವರೊಳಗೆ ಕೆಲರು ॥
ಕೋವಿದರು ನಾವ್ ನಮಿಸಿದೊಡನಿವ ।
ಭಾವಿಸುತ ಶರಣೆರಗಿದವರೆಂ- ।
ದಾವನಿತೆಯನು ಕೊಡನೊ ನಮಗೆಂದೆಂಬ ಚಿಂತೆಯಲಿ ॥ ೬ ॥
ಎರಗದಲೆ ಯೆದೆ ಯುಬ್ಬಿಸುತ ನಿಂ- |
ದಿರುವರೀಬಗೆ ನೋಡಿ ಪರಮಾ ।
ಪರದೊಳುಚಿತಾಸನವನಿತ್ತೆಲ್ಲರನು ಕುಳ್ಳಿರಿಸಿ ॥
ಸರಸ ಕುಶಲಪ್ರಶ್ನೆಗಳ ನಾ- ।
ಚರಿಸಿದೊಡೆ, ಬೇಸರದೊಳಿತ್ತು- ।
ತ್ತರವ ನಸುಹಾಸ್ಯದೊಳು ನಗುತಿಂತೆಂದರಾ ನೃಪಗೆ ॥ ೭ ॥
ರಾಯ ಚಿತ್ತೈಸಿಂದು ನೃಪರ ನಿ- |
ಕಾಯ ಬಂದಿಹದೇಕೆ ಮರೆತಿಯೊ |
ತೋಯಜಾನನೆಯಾದ ನಿನ್ನಾತ್ಮಜಳ ಸುಂದರದ ॥

---

(೬) ತೊಡವನು-ವಸ್ತ್ರಾಭರಣವನ್ನು ಗತಿಸಿಹುದು-ಹೋಗಿರುವದು. (೭) ಕೋವಿದರು-ಪಂಡಿತರು. (೮) ಆಚರಿಸು-ಕೇಳು (೯) ನಿಕಾಯ-ಗುಂಪು.

ಕಾಯುವೀಕ್ಷಿಸಿ ವರಿಸಲಿಂಪತಿ |
ಛಾಯದಿಂದ್ಯೈದಿಹದೆನಲು ಜಲ ।
ಜಾಯ ತಾಕ್ಷಿಗೆ ಬರಲು ಪೇಳ್ದೊಡಾಗ ಸಾವಿತ್ರಿ ॥ ೮ ॥
    ಬಟ್ಟ ಮುಕ್ತಾವಳಿಯ ಕೊರಳೊಳು ।
ಕಟ್ಟಿದಳು, ಪದಯುಗಕೆ ನೂಪುರ ।
ನಿಟ್ಟ ಕಸ್ತೂರಿ ತಿಲಕವನು ತೀಡಿದಳು ಪಣೆಯೊಳಗೆ ॥
ನಟ್ಟ ನಡುವಿನೊಳಿಟ್ಟ ರಸ್ನದ ।
ಪಟ್ಟೆಯನು ಪೊಳಪಿಸುತ ಗೃಹವನು ।
ಬಿಟ್ಟು ಪೊರಟಳು, ಸಿರಿಯು ಜಲಧಿಯ ಸುಳಿದು ಬರುವಂತೆ ॥ ೯ ॥
    ಝಣ ಝಣಿಪ ಝೇಂಕೃತಿಯೊಳಾ ವರ ।
ವನಿತೆ ವಹಿಲದೊಳೈದುತಿರೆ, ಪೊ- ।
ಏನಿಯೊ, ಮದನಾರಾಧ್ಯ ಕುಲದೇವತೆಯೊ, ವಿಧಿಸತಿಯೊ ॥
ದಿನಮಣಿಯ ಪೋಲ್ ಪೊಳೆಯುತಿಪ ಕಾ- ।
ಮಿನಿಯಿದಾವಳು ಬಂದಳೆಮ್ಮರ- ।
ಮನೆಗೆನುತ, ಶಂಕೆಯೊಳು ನೋಡಿದನಶ್ವಪತಿ ಮಗಳ ॥ ೧೦ ॥
    ಬಂದೊಡನೆ ಯೋಲಗಕೆ ತಾನರ- ।
ವಿಂದಸಖನೋಲ್ *ಪ್ರಖರ ಕಿರಣವ ।
ಸಂದಿಸುತ, ರವಿ ಬಂದೊಡನೆ ಮುಗಿವಾ ನಿಶಾಬ್ಜಗಳ ॥
ಅಂದದಲಿ ಮುಚ್ಚಲು ಧರಾಧಿಪ ।
ವೃಂದದೀಕ್ಷಣ ಕುಮುದ ಕೋಪದೊ- ।
ಳಿಂದು ಮುಖಿ ಪೊರಮಟ್ಟು ಮಾತೆಗೆ ನುಡಿದಳೀ ತೆರದಿ— ॥ ೧೧ ॥
    ಏಕೆ ಬಂದಿಹರಿಲ್ಲಿಗಿವರಾ- ।
ನೇಕ ವಿಭವಾಡಂಬರದಿ ಪೆ- ।
ಣ್ಣೋಕರಿಸಿದವ ರೈದಲಿದು ದೇವಾಲಯವೊ? ಮಠವೊ? ॥

---

(೯) ಮುಕ್ತಾವಳಿ-ಮುತ್ತಿನ ಸರ. (೧೦) ವಹಿಲ-ತೀವ್ರ. (೧೧)ಮುಗಿವ-ಮುಚ್ಚುವ. ಅಂದ-ರೀತಿ. (೧೨) ವಿಭವ-ಶ್ರೀಮಂತಿಕೆ.

ಸಾಕು ಸಾಕೀ ಬಗೆಯ ಜನರೀ ।
ಲೋಕದೊಳು ತುಂಬಿಹರೆ? ಪೋಗುವೆ ।
ನೇಕಿವರ ಮನಗೆಲ್ಲ ಮಹದಾಪೇಕ್ಷೆ ಯೆನಗಿನ್ನು ॥ ೧೨ ॥
ಗಂಡಸರೆ ಕನ್ಯೆಯಳ ನಗೆಮೊಗ ।
ಮಂಡಲವನೀಕ್ಷಿಸದ ಪುರುಷರು ।
ಕಂಡರೇನೆನ್ನುವಳೆನುತ ಕಣ್ಮುಚ್ಚಿ ಕುಳಿತರ್ಗೆ ॥
ಜೊಂಡು ಮೀಸೆಗಳೇಕೆ ತೆಗೆ, ಭೂ- ।
ಮಂಡಲಾಧಿಪರೆಂಬ ಪರವೋ- ।
ದ್ದಂಡ ಬಿರದೇಕೆನುತ ಪೊರಮಟ್ಟಿಳು ನಿಜಾಲಯಕೆ ॥ ೧೩ ॥
ನೋಡಿ ಭೂಮಿಪನಿತ್ತ ಜನತಾ ।
ರೂಢಿಗನುಚಿತ ವಾಯ್ತು ಕನ್ಯೆಯ ।
ಬೇಡ ಬಂದೀ ನೃಪರು ನೋಡದಿದವಳ ಸಿರಿಮೊಗವ ॥
ಛೇಡಿಸಿದ ತೆರವಾಯ್ತು ಹರ! ಹರ!! ।
ಮಾಡಲೇನಿದಕಿನ್ನು ಸವಿ ಮಾ- ।
ತಾಡಿ ನೋಡುವುದುಚಿತ ವೆನುತೆಲ್ಲರಿಗೆ ವಿನಯದಲಿ— ॥ ೧೪ ॥
ಏಕೆ ಕನ್ಯೆಯಳುಚಿತಳಪ್ಪಳೆ? ।
ಲೋಕ ಪಾಲಕರಿದ್ದು ನಿಮಗಿ- ।
ನ್ನೇಕೆ ಬಿಡಿರೀ ಹಾಳು ಲಜ್ಜೆಯು, ಪೇಳಿರೆಮಗೆನಲು ॥
ಕಾಕು ದೈವಿಗಳಾವು, ನೃಪ ನಿ- ।
ನ್ನೀ ಕುವರಿ ದೇವಾಂಶಳೆಮಗಿ- ।
ನ್ನೇಕೆ ಜನನಿಯು ಪೊರೆಯ ಬೇಕೆಂದುಸಿರು ಮರೆಯದಲೆ ॥ ೧೫ ॥
ಪೋಗುವೆವು ನಾವೆನುತ ಶಿರವನು ।
ಬಾಗಿದೊಡೆ, ಮೀಸೆಗಳ ಕುಡಿಮೊಗ ।
ಬಾಗಿದವು. ಕೇಳ್ ಮುನಿಪ ಪರಮಾಶ್ಚರ್ಯದೀ ಕಥೆಯ ॥
ನೀಗುವದು ಕ್ಷುಧೆ ತೃಷೆಯು ನಿರ್ಮಲ ।
ವಾಗುವದು ಮನ, ಪೇಳಿ ಕೇಳ್ವರು ।
ನೀಗುವರು ಭವತಾಪವನು ಕೇಳಿನ್ನು ಮುನ್ನುಡಿಯ ॥ ೧೬॥

ಬಂದ ನೃಪಜನ ಪೋಗೆ, ಕರುಣಾ ।
ಸಿಂಧು ಮದ್ರಾಧಿಪನು ಮನದೊಳು ।
ನೊಂದು, ಮುಂದಿದಕಾವ ಬಗೆ ಯೆಂದೆನುತ ಬಿಸುಸುಯ್ದು ॥
ಇಂದಿನೀಬಗೆಗಾತ್ಮಜೆಯ ಮುಖ ।
ಬೆಂದು ಕುಂದಿಹದೆನ್ನೆನುತಲರ ।
ವಿಂದಜಾಸನ ಸತಿಗೆ ಪೇಳಿದನಿಂತು ಭಕುತಿಯಲಿ ॥ ೧೭ ॥
ಏನಿದಚ್ಚರಿ ವಿಮಲ ತೇಜೋ- ।
ಹೀನಳೀ ಮತ್ಕುವರಿ ಹಿಮಕರ ।
ಭಾನುಗಳ ಪೋಲ್ ಪೊಳೆವವಳ ವರಿಸಲ್ಕೆ ಬರದಿಹುದು ॥
ದೀನ ವತ್ಸಲೆ ದೇವಿ " ನಿನಗನು- ।
ಮಾನ ಬೇಡಾಂ ಪೊರೆವೆ " ನೆಂದಭಿ ।
ಮಾನವಭಯವ ಮರೆಯಬೇಡವಧರಿಪುದೆನ್ನೊರಲ ॥ ೧೮ ॥
ಒಪ್ಪಿದೆನು " ಕುಲಪಾವನಳು ಮಗ- ।
ಳಪ್ಪ " ಳೆಂಬಿನಿನುಡಿಗೆ ಕೇಳಲು ।
ತಪ್ಪಿದೆನು ನಾನಳಿಯನನು ವಿಪಿನಾಂತರದಿ ನಿನ್ನ ॥
ತಪ್ಪನೆಣಿಸಿದೊಡೆನ್ನ ಕುಲ- ತರು ।
ಬಪ್ಪುದೆಂತುದ್ಭವಿಸಿ ಬಹು ಮುಳಿ- ।
ಸಿರ್ಪಳಾತ್ಮಜೆಗಾವ ಬಗೆ ಪೇಳೆನುತ ಮನದೊಳಗೆ ॥ ೧೯ ॥
ಬೇಡುತಿನಿತಜ ಸತಿಯ ನುರೆ ಕೊಂ- ।
ಡಾಡಿ ಬಂದಾತ್ಮಜೆಯ ನಿಳಯಕೆ ।
ನೋಡಿ ದುಗುಡವಿದೇನು ಬಿಡು, ನಮಗೇಕೆ ಕಡು ಚಿಂತೆ ॥
ನಾಡನೆಲ್ಲವ ಸೃಜಿಸುವಜ ನುಡಿ- ।
ಗೇಡಿಯೆನು ಮಾಡುವನೆ ಸತಿಯಳ ।
ಜೋಡ ಬಿಡು ಮನ-ತಾಪವೆನಲಿಂತೆಂದಳಿಂದುಮುಖೀ ॥ ೨೦ ॥

(೧೭) ಸಿಂಧು–ಸಮುದ್ರ. ಬಿಸುಸುಯ್ದು–ನಿಟ್ಟುಸುರು ಬಿಟ್ಟು. (೧೮) ಭಾನು–ಸೂರ್ಯ. ಅಭಿಮಾನದ-ಪ್ರೀತಿಯ. ಇನಿನುಡಿ-ಸವಿಮಾತು.

ತಾತ! ಕಂಡೊಡೆ ಕಣ್ಣು ಮುಚ್ಚಿದು-।
ದೀತರಾಂ ರಾಕ್ಷಸಿಯೊ, ನುಂಗುವ।
ಭೂತ ಯಕ್ಷಿಣಿಯೋ? ಪಿಶಾಚಿಯುಳೋ? ಕುಲಾಂತಕಳೊ? ॥
ಪಿತನೆ? ವಸುಧೀಶರಾಶಿಯುಃ।
ಭೂತಳದೊಳಾಂ ಪೋಗಿ ಮನ ಬಂ-।
ದಾತನನು ಪತಿಯಾಗಿ ವರಿಸುವೆನೆನಲು, ನರನಾಥ— ॥ ೨೦ ॥
ತರಳೆ! ತಾಯ್ತಂದೆಗಳಿಗೀಮಡಿ।
ಸರಸ ಮಪ್ಪುದೆ? " ಜನನಿ ಜನಕಾ-।
ದ್ಯರುಗಳಿರೆ, ಬೀಳ್ಕೊಟ್ಟರೆಂತುಟೊ ಸುತೆಗೆ ತನ ಪತಿಯ ॥
ಅರಸು ನೀನೆಂದೆ" ಸುತ ಜಗದೊಳು।
ಜರಿಯದಿಹರೇ? ತಿಳಿದು ನೋಡೆಂ-।
ದುರಗವೇಣಿಯ ಸಂತವಿಸೆ ನೃಪ ನೆಂದಳಂಬುಜಾಕ್ಷಿ ॥ ೨೧ ॥
ಸಣ್ಣವಳು ಕನ್ಯೆಯುಳು ತಾನಿದು-।
ವನ್ನೆಗೀನುಡಿ, ಪತಿಯ ಗುಣ ಸಂ-।
ಪನ್ನತೆಯ ಕುಲ-ಶೀಲ-ವಯ-ರೂಪವ ಪರೀಕ್ಷಿಸುವ ॥
ತನ್ನ ಹಿವನಾಹಿತವ ತಿಳಿಯುವ।
ಕನ್ಯೆ ತನ್ನರಸನನು ಪುಡುಕಿದೊ-।
ಡಿನ್ನು ತಪ್ಪೇನಿರುವುದನುಚಿತ ಮಾದೊಡವನಿಯೊಳು ॥ ೨೨ ॥
ತೀರ್ಥಯಾತ್ರೆಯ ನೆವದಿ ವೃದ್ಧಾ-।
ಮಾತ್ಯರಿಂದೊಡಗೂಡಿ ಪೋಗಿ, ಪ-।
ವಿತ್ರ ಪುಣ್ಯಕ್ಷೇತ್ರಗಳೊಳಾರ್ಜಿಸುತ ಸುಕೃತವನು ॥
ಪಾತ್ರ ಸಚ್ಚಾರಿತ್ರ ಸದ್ಗುಣ,।
ಧಾತ್ರಿಪರೊಳೊರ್ವನನು ಪುಡುಕಿ ಕೃ-।
ತಾರ್ಥಳಾಗುವೆ ನೆನಲು ಭೂಪತಿ ನುಡಿದನಾತ್ಮಜೆಗೆ ॥ ೨೩ ॥

(೨೦) ಕುಲಾಂತಕಳೊ–ವಂಶವನ್ನು ನಾಶಮಾಡುವವಳೊ (ಮಾರಿಯೊ) (೨೧) ಎಂತುಟೋ–ಹೇಗೆಯೋ. ಅರಸು–ಹುಡುಕು. ಉರಗ-ಸರ್ಪ.

ನಿಃಕರುಣಿಗಳು ಪುರುಷರೆಂದತಿ ।
ಧಿಕ್ಕರಿಸುವರು ಕೋಮಲೆಯರೇ— ।
ತಕ್ಕೆ ಯೆಮಗೀ ತೊಡಕು ತೆಗೆ ನವಮಾಸ ಜಠರದೊಳು ॥
ಕಕ್ಕುಲತೆಯಿಂ ಪೊರೆದು ಸವಿಯುಣಿ- ।
ಸಿಕ್ಕಿದವಳೊಪ್ಪಿದೊಡೆ ಪೋಪುದು ।
ಮಿಕ್ಕ ಮಾತೇಕೆನಲು, ಜನನಿಗೆ ನುಡಿದಳೀ ತೆರದಿ— ॥ ೨೫ ॥

ತಾಯೆ ಪೋಗುವೆ *ಕ್ಷೇತ್ರ ತೀರ್ಥ ನಿ- ।
ಕಾಯಗಳ ನೋಡುವ ನೆವದಿ, ಪತಿ ।
ರಾಯನನ್ನರಸಲ್ಕೆ, "ಮನದಿಷ್ಟಾರ್ಥವನು ಪೊಂದಿ ॥
ಬಾಯೆನುತ ಪರಿಸೆ" ೦ದ ಕಮಲ ದ- ।
ಳಾಯತಾಕ್ಷಿಯ ನುಡಿಗೆ ಸರಸೋ- ।
ಪಾಯವೆಂದೊಡನೊಪ್ಪಿ ಬೀಳ್ಕೊಟ್ಟಳು ತನೂಭವಳ ॥ ೨೬ ॥

ಜನನಿ ಬೀಳ್ಕೊಟ್ಟೊಡನೆ ಜನಕಗೆ ।
ವಿನಯದಿಂ ಶಿರವಾಗಿ— ಪೇಳಿಂ— ।
ದಿನ ಪ್ರಯಾಣ ಸ್ಥಿತಿಯು, ವೃದ್ಧಾಮಾತ್ಯನಿಗೆ ಬಿಡದೆ ॥
ಎನೆ, ಕರೆದು "ರಕ್ಷಿಪುದು ಯೆನ್ನೀ ।
ತನುಜೆಯನು" ಯೆಂದುಸಿರೆ ಸಚಿವಗೆ ।
ಮಣಿಖಚಿತ ಪೊಂದೇರನಾರೋಹಿಸಿದರಾಕ್ಷಣದಿ ॥ ೨೭ ॥

ಇತಿ ಶ್ರೀ ಕವಿ ಕಿಂಕರ ತೊರವೆ ರಾಘವಾಂಕ ಕವಿ ವಿರಚಿತ

## ಸತಿ ಸಾವಿತ್ರಿ ಮಹಾತ್ಮೆಯೊಳ್ ಪಂಚಮೋಧ್ಯಾಯ

ಪದ ೧೩೦ ಕ್ಕೆ ಮಂಗಲಮಸ್ತು.

---

(೨೫) ಜಠರ—ಹೊಟ್ಟೆ. (೨೬) ಬೀಳ್ಕೊಟ್ಟಳು-ಅಪ್ಪಣೆಕೊಟ್ಟಳು. (೨೭) ಪ್ರಯಾಣಸ್ಥಿತಿಯು-ಹೊರಡುವ ಸಿದ್ಧತೆಯನ್ನು. ಖಚಿತ--ಕೆಚ್ಚಿದ.

## -: ಅಥ ಷಷ್ಠೋಽಧ್ಯಾಯಃ :-

ಸಾ. ಸೂ. ಪ. ॥ ಪುಡುಕಿತಂಪಾ ಪತಿಯು ವರುಷಕೆ ।
ಮಡಿವನೆಂದಜ ಪುತ್ರನಾಡಿದ ।
ನುಡಿಯ ಕೇಳದಲವನೆ ಪತಿ ಯೆನಗೆಂದಳಬುಜಾಕ್ಷಿ ॥
ಕೇಳು ವಿಧಿ ಸಂಭವನೆ ಪೋಗೆ ನೃ- ।
ಪಾಲನಾತ್ಮಜೆ, ನೃಪತಿ ಚಿಂತಾ ।
ಜಾಲದಲಿ ಮುಳುಗಿದನು ಶಿಶು ಪೋಗಿರ್ದ ಮೃಗದಂತೆ ॥
ಕಾಲಕಾಲಕೆ ಸ್ಮರಿಸಿ, ಮಗಳೆ- ।
ನ್ನಾಲಯಕೆ ತಾಂ ಬರ್ಪಳೆಂದಿಗೊ ।
ಪಾಲಿಸುವರಾರಕಟ ಸಮ್ಮಂತವಳನನು ದಿನದಿ ॥ ೧ ॥
ಆವ ದೇಶಕೆ ಪೋಗುವಳೊ? ಮ- ।
ತ್ತಾವ ನಗರದೊಳಿಹಳೊ? ದೊರೆಯದೊ- ।
ಡಾವ ಬೆಟ್ಟವ ಸೇರುವಳೊ? ಮನತಾಪದೊಳು ನೊಂದು ॥
ಆವ ಹೊಳೆಗೀಡಾಗುವಳೊ? ಕಂ- ।
ಡಾವ ಕುಜನರು ಬಾಧಿಪರೊ? ಮು- ।
ಛಾವನೆಯೊಳಿಲೆ ದೇವಿ ಪೊರೆ, ಯೆಂದೊರಲಿದನು ಭೂಪ ॥ ೨ ॥
ಕೆಲವು ದಿನವೀತೆರದ ಚಿಂತಾ ।
ನಲದಿ ಕುದಿಯಲ್ಕೊಂದುದಿನ ನಿಜ ।
ನಳಿನ ಮುಖಿ ಬಂದೀಸು ಮಗಳೆಲ್ಲಿಹಳು ಮಾರ್ಗದಲಿ ॥
ತೊಳಲಿ ಬಳಲಿಹಳೆಷ್ಟೊ? ಬರದೊಡ ।
ಮುಳಿಯದೆನ್ನೀ ಜನ್ಮ" ವೆನೆ ಪ್ರ- ।
ಜ್ವಲಿಸಿದುದು ಚಿಂತಾಗ್ನಿ ಸತಿವಾಗ್ವಾಯುವೀವನೆಗೆ ॥ ೩ ॥
ಕೇಳಿ ನೃಪ ಬಿಸುಸುಯ್ದು ಪಾಯವ ।
ಪೇಳು ನೀನೆನೆನಗರಿಯದಿನ್ನಾ ।
ಬಾಲಿಕೆಯುನರಸಲ್ಕೆ ಕಳುಹಿರ್ಪೆನು ಚರಾಗ್ರಣಿಸು ॥

---

**ಸೂ.** ಅಜಪುತ್ರ-ನಾರದ. (೨) ಕುಜನರು-ದುಷ್ಟ ಜನರು. ಬಾಧಿಪರೊ-ನೋಯಿಸುವರೊ. (೩) ಅನಲ-ಬೆಂಕಿ. ವಾಗ್ವಾಯು-ಮಾತೆಂಬಗಾಳಿ.

ಕೇಳಿ ಬೇಸರಗೊಂಡಳೆನೆ ನೆರೆ- ।
ಕೇಳದಾದಳು ವಿಧಿಸತಿಯು, ಮ- ।
ತ್ತಾಳಿಸುವರಾರುಂಟು ಜಗದೊಳಗೆನೆ ನಭಸ್ಥಳದಿ ॥ ೪ ॥
ಗೋಪ ಗೋಪಿತ ಗೋಜನಾಭ ಸು ।
ರೂಪ ಗೋಪಿ ಜನಾಳಿ ಜಲಧಿ ಕ- ।
ಳಾಪ ಪರಮ *ಪ್ರತಾಪ, ಸುರಕುಲ ದೀಪ, ಬಹುರೂಪ ॥
ಪಾಪಹರ ಸಾಮೋಪಲಾಲಿತ ।
ಕಾಪುರುಷ ಶಿಕ್ಷಾಪತಿಯೆ ಜನ- ।
ತಾಪಹರ ಕಾಪಾಡು ಭಕುತರನೆಂದೊಡವನೀಶಾ ॥ ೫ ॥

ಕಮಲ ಕನ್ಯಾಧಿಪನ ನಾಮವ ।
ನುಡಿವರಾರಸ್ಖಲಿತದಿಂದೆನ- ।
ಲೊಡನೆ ನವಕುಸುಮಾನ್ವಿತದ ಶ್ರೀ ತುಲಸಿ ದಂಡೆಯನು ॥
ಮುಡಿದು, ವೀಣೆಯೊಳೊಪ್ಪುತಿರುವಾ ।
ಸಡಗರದ ಸುರಮುನಿಯ ಮೊಗ ಕಂ- ।
ಡೊಡನೆ ಪರಮಾನಂದವಾಂತ್ಯೆಲೆ ಮುನಿಪ ಕೇಳೆಂದ ॥ ೬ ॥
ಬಂದ ನಾರದನಙ್ಘ್ರಿಕಮಲಕೆ ।
ನಂದದಿಂ ಶಿರವಾಗಿ ಸನ್ಮನ ।
ದಿಂದ ನವ-ಪೂಜಾವಿಧಾನದೊಳರ್ಚಿಸುತಲಾಗ ॥
ವಂದಿಸಲ್ಕಷ್ಟಾಂಗದಿಂ " ಸುಖ- ।
ದಿಂದ ಬಾಳೇಳೆಂದು ತವ ಮುಖ ।
ಚಂದಿರನು ಬಾಡಲ್ಕೆ ಕಾರಣವೇನೆ" ನಲು ಭೂಪ— ॥ ೭ ॥
ತೆರಳಿ ಬಹುದಿನವಾಯ್ತು ಮೋಹದ ।
ತರಳೆ ಬರದಿಹಳಿನ್ನು, ಪತಿಯನು ।
ಮೊರಕಿಸುವೆ ನಾನೆನುತ ಹಟ ತೊಟ್ಟಿರುವಳವಳಿಂಗೆ ॥

(೫) ಗೋಪಿತ-ಜಗದೋತ್ಪತ್ತಿಗೆಕಾರಣನು. ಗೋಜ-ಪದ್ಮ. ಕಳಾಪ-ಶಶಿ. ಸಾಮೋಪಲಾಲಿತ-ಸಾಮವೇದವನ್ನು ಹೆಚ್ಚಾಗಿ ಕೇಳುವವ.

ದೊರೆತಿಹನೊ? ಮನಮೋಹನನು ಮೇಣ್ ।
ದೊರೆಯದಿಹನೊ ಪೇಳ್ವುದೆಮಗಿಂ- ।
ದಿರದೆ ನೀವೆನಲಾಗ ಮುನಿವರ ನುಡಿದನರಸಂಗೆ ॥ ೮ ॥
ಕೆಟ್ಟೆ! ಕೆಟ್ಟೆಲೊ!! ಮಹಿಪ ನೀಂ ಬೀ- ।
ಳ್ಕೊಟ್ಟು, ತನುಜಳ ಪತಿಯನರಿಸೆಂ- ।
ದಟ್ಟುವರೆ ಪಿತನಿರ್ದ? ನಗೆಗೆಡೆಯಾಯ್ತು ಮೂಜಗಕೆ ॥
ಕೊಟ್ಟರಾರೀ ಪರಿಯ ಬುದ್ಧಿಯ- ।
ನಿಷ್ಟವಾಗಿರ್ದಡೆಯು, ಮನದಾ- ।
ಭೀಷ್ಟ ಸಿದ್ಧಿಪುದೈದುವಳು ಯಿಂದೆನಲು ನರನಾಥ— ॥ ೯ ॥
ಈ ತೆರದೊಳಿರ್ದಾದೊಡೇಂ ಮುನಿ- ।
ನಾಥ? ಪೇಳ್ವುದದೇನು, ದುಃಖ- ।
ವ್ರಾತದಲಿ ಬೆಂದೆನ್ನ ಹೃತ್ಕುವಲಯವು ಕಲ್ಲಾಯ್ತು ॥
ಏತಕಿನ್ನಂಜುವದು ದೀನಾ- ।
ನಾಥ ಬಂಧುವಿರಲ್ಕೆಮಗೆ ದುಃ- ।
ಖಾತಿರೇಕವದೇಕೆನಲು, ಮುನಿ ನುಡಿದನರಸಂಗೆ ॥ ೧೧ ॥
ಪೇಳಿ ಕೇಳ್ವುದದೇನೆಲೈ ಭೂ- ।
ಪಾಲ! ನಿನ್ನಾತ್ಮಜೆಯ ಪತಿ, ಗುಣ- ।
ಶಾಲಿ, ಜಗಮೋಹನನು, ಪರಮೋದಾರ, ನಾದಡೆಯು ॥
ಬಾಳನೈ ಬಹುಕಾಲ, ವರುಷಕೆ ।
ಕಾಲವಶನಹನಿಂದಿನಿಂದೆನೆ ।
ಕೇಳಿ ಧರೆಗುರುಳಿದರು ದಂಪತಿಗಳು ವಿಘಾತಿಯಲಿ ॥ ೧೧ ॥
ಕಂಡು ಮುನಿಪತಿಯಾಗ ತನ್ನ ಕ- ।
ಮಂಡಲೋದಕ ಸಿಂಪಡಿಸೆ, ಸ್ಮೃತಿ ।
ಗೊಂಡು ಪದಯುಗಕೆರಗಿ ನಯ ಭಯ ಭರಿತ ಭಕುತಿಯಲಿ ॥

---

(೮) ಮನಮೋಹನ-ಮನಸ್ಸನ್ನು ಸೆಳೆಯುವವ (ಗಂಡ) (೯) ನಗೆಗೆಡೆಯಾಯ್ತು-ನಗಲು ಹಾದಿಯಾಯಿತು. ಅಭೀಷ್ಟ-ಬಯಿಕೆ.

ಚಂಡ ಮುನಿಪತಿ ನಿಮ್ಮ ಪರಮೋ- ।
ದ್ದಂಡ ಕೀರ್ತಿಧ್ವಜವದೀ ಭೂ- ।
ಮಂಡಲದಿ ಬೆಳಗುತಿದೆ ಪೇಳೆಮಗಿದಕುಪಾಯವನು ॥ ೧೨ ॥
    ಹೇಳುವದು ಮತ್ತೇನುಪಾಯವ ।
ಪೇಳವನ ಬಿಟ್ಟಾವ ಧರಣೀ ।
ಪಾಲರನು ವರಿಸೆಂದು ನಿನ್ನಾತ್ಮಜೆ ಬಹುವಿಧದಿ ॥
ಕೇಳಿದೊಡೆ ಗುಣವಾಯ್ತು, ಬಿಟ್ಟೊಡೆ ।
ತಾಳಲೇನಸಮರ್ಥಳೇ ತವ ।
ಬಾಲೆ ವಿಧಿಪತಿಯಂಶಳೆಂದಡಗಿದೊಡೆ ಮುನಿ ಪತಿಯು ॥ ೧೩ ॥
    ಹಸಿವು ತೃಷೆಗಳ ತೊರೆದಪರಿಮಿತ ।
ವ್ಯಸನದಿಂ ಶೋಕಾಗ್ನಿಯೊಳು ಕಂ- ।
ದಿಸುತ ದೇಹವನಿರಲು ದಂಪತಿಗಳು ಗೃಹಾಂತರದಿ ॥
ವಸುಧಿಪತಿ " ಯೆನ್ನಾಗಮವ ಪಿತ- ।
ಗುಸಿರೆ" ಸುತ ನಿನ್ನಾತ್ಮಜೆಯು ಕಳು ।
ಹಿಸಿದಳೆನ್ನೆಸುತೆರಗಿ ಬಿನ್ನೈಸಿದನು ಚರನೋರ್ವ ॥ ೧೪ ॥
    ಕೇಳಿದೊಡನೀ ನುಡಿಯ ದುಃಖವು ।
ಡಾಳಿಸಿತೊ ಮೇಣಾತ್ಮಜೆಯು ತ- ।
ನ್ನಾಲಯಕೆ ತಾಂ ಬಂದಳೆಂದಾನಂದ ಮಿಗಿಲಾಯ್ತೊ ॥
ಪೇಳಲರಿಯೆನೊ ಮುನಿವರನೆ ತ- ।
ತ್ಕಾಲದಲಿ ನಯನಾಂಬುಜದಿ ಜಲ- ।
ಜಾಲ ಜಳ ಜಳಿಸಿದವು ತದ್ದಂಪತಿಗಳೀರ್ವರಲಿ ॥ ೧೫ ॥
    ನಡೆದೊಡಲ್ಲಿರ್ದಖಿಲ ಪರಿಜನ ।
ಗಡಣದಿಂದನಿತರೊಳು ದಿಗ್ದಿಶೆ ।
ಯೊಡೆದು ಸೂರಿಡುವಂತೆ ವಂದಿಗಳಾ ಮಹಾಧ್ವನಿಯು ॥

---

(೧೩) ವರಿಸು–ಲಗ್ನವಾಗು. (೧೪) ತೊರೆದು-ಬಿಟ್ಟು. ಆಗಮವ-ಬರುವಿಕೆಯನ್ನು. ಚರ-ದೂತ. (೧೫) ಡಾಳಿಸು-ಹೆಚ್ಚಾಗು.

ಒಡನೆ ಬಹ ಜಯ ಭೇರಿಯನು ಕೇ- |
ಳ್ದೊಡನೆ ಪುರಸತಿ ಜಾಲ ಹರ್ಮ್ಯವ |
ನಡರಿದುದು ಕಡು ತವಕದಿಂ ಕೈಗೆಲಸಗಳ ನುಳಿದು ॥ ೧೬ ॥
ತೀಡಿದರೆ ಕುಂಕುಮದಿ ಕೆಲಬರು ।
ಜೋಡಿಸುವ ಪೂಮಾಲೆಯಂ ನಲಿ- ।
ದಾಡಿಸುತ ಚೀರಿಡುವ ಪಸುಳರನೆತ್ತಿ ಮೈದಡವಿ ॥
ನೋಡು ನೋಡೆಂದೆನುತ ಕೆಲಬರು, ।
ಪಾಡು ವೀಣೆಯ ನುಳಿದು ಕೆಲಬರು, ।
ನೋಡಲೆಂದವಸರದೊಳೈತಂದರು ವಿಳಾಸದಲಿ ॥ ೧೭ ॥
ಅಷ್ಟರೊಳು ನೃಪ ಕುವರಿ, ಮನದಾ- ।
ಭೀಷ್ಟ ಫಲಿಸಿಹುದೆಂಬಪರಿಮಿತ |
ತುಷ್ಟಿಯಂ ಪಿತಗಾಗ ಪೇಳುವೆನೆಂಬ ತವಕದಲಿ ॥
ಪಟ್ಟಣದ ಹೆಬ್ಬಾಗಿಲದಿ ಬರೆ, ।
ಪುಷ್ಟ ಕಾಯವದಳಿದು ಚಿಂತಾ- ।
ವಿಷ್ಟದಿಂ ಕಳೆಗುಂದಿ ಬಹ ತಾಯ್ತಂದೆಗಳ ನೋಡಿ ॥ ೧೮ ॥
ಸಂಭ್ರಮದೊಳಂಬರದಿ ಬಹ ಶಶಿ- ।
ಬಿಂಬ ರಾಹುಗ್ರಸ್ತದಿಂ ಹತ ।
ಗೊಂಬ ಪೋಲ್ ಕಳೆಗುಂದಿದಳು ನೋಳ್ಪಖಿಲ ಜನ ಮನದಿ ॥
ತುಂಬಿತತ್ಯಾಶ್ಚರ್ಯ ಬಳಿಕಾ- |
ಯೆಂಬುಜಾನನೆ ತನ್ನಪತಿಗೇ- ।
ನೆಂಬುವನೊ ಪಿತನೆನುತ ಮನದೊಳು, ಬಾಗಿದಳು ಪದಕೆ ॥ ೧೯ ॥
ವಂದಿಸಿದ ತನು ಸಂಭವಳನಾ- ।
ನಂದದಿಂ ಬಿಗಿದಪ್ಪಿದರು ತಾ- ।
ಯ್ತಂದೆಗಳು ಕಾರ್ಮುಗಿಲ ಜೆಳಗುವ ಮಿಂಚಿನಂದದೊಳು ॥

(೧೬) ಹರ್ಮ್ಯ-ಉಪ್ಪರಿಗೆ, ತವಕ-ತೀವ್ರ. (೧೭) ಅರೆಕುಂಕುಮ-ಅರ್ಧಕುಂಕುಮ. (೧೮) ಚಿಂತಾವಿಷ್ಟದಿಂ-ಚಿಂತೆ ಎಂಬ ಪಿಶಾಚಬಾಧೆಯಿಂದ

ಬಂದು ತೋರದೊಲಾಯ್ತು ಮತ್ತಾ- ।
ನಂದ ಬೇಗದೊಳರಮನೆಗೆ ನಡೆ- ।
ತಂದು ಕುಲದೇವತೆಗೆರಗಿ ಕುಳಿತೊಡೆ ಸುಖಾಸನದಿ ॥ ೨೦ ॥
ತಾತ ಪೇಳ್ವುದಿದೇನು ? ನಾಂ ತೋ- ।
ಷಾತಿರೇಕದಿ ಬರಲು, ನೀಂ, ಚಿಂ- ।
ತಾತುರವ ತೋರುವರೆ? ದೊರೆತಿರೆ ಮನ್ಮನೋಹರನು ॥
ಭೂತಳದಿ ಬಹು ಸುಗುಣನೆಂದತಿ ।
ಖ್ಯಾತಿಯಾದ ದ್ಯುಮತ್ಸ ನೃಪ ತನು- ।
ಜಾತ, ರೂಪಾಧಿಕನೆನಲು, ನೃಪನೆಂದನಾತ್ಮಜೆಗೆ ॥ ೨೧ ॥
ಲೇಸು ಮಾಡಿದೆ, ನಮಗೆ ಸಮ ವಸು- ।
ಧೀಶರೇ? ಯವರಖಿಲ ಧರೆ ರಿಪು- ।
ವಾಸಕೆಡೆಯಾಗಿಹುದು, ವಾಸಿಪರವರು ಕಾಡಿನೊಳು ॥
ಗಾಸಿಯಾಗುತ ಹಸಿದೊಡುದರ ।
ಗ್ರಾಸನಿಲ್ಲದೆ ತೊಳಲುತಿಹ ಭೂ- ।
ಮೀಶರೆಂತಹರವರೆನಲು ನುಡಿದಳು ಸರೋಜಮುಖೀ ॥ ೨೨ ॥
ತಂದೆ! ಸಿರಿಯತಿ ಚಂಚಲಳು, ಸುಖ- ।
ದಿಂದ ಬಾಳ್ವರನೊಂದು ನಿಮಿಷಕೆ ।
ತಂದು ಕೆಡಹುವಳವಳು ಯಾತನೆಯೊಳಗರಕ್ಷಣದಿ ॥
' ಇಂದುಣಲು ಗತಿಯಿಲ್ಲದಾಯ್ತೆನ- ।
ಗೆಂದು ' ತೊಳಲುವ ನರನ ಸುಖ ಸಾ- ।
ನಂದ ಸಾಮ್ರಾಜ್ಯಾಧಿಪನ ಮಾಡುವಳು ಮಮತೆಯೊಳು ॥ ೨೩ ॥
ಜರೆಯುವರು ಹಿರಿಯರನು, ಸಿರಿ ಕ- ।
ಣ್ದೆರೆದೊಡನೆ, ಸದ್ಬೋಧಿಪರ ಧಿ- ।
ಕ್ಕರಿಸುವರು, ಪಾಪಾಗರವು ಸಿರಿಯೊಲ್ಮೆ ಲೋಕದೊಳು ॥

---

(೨೨) ರಿಪು-ವೈರಿ. ಎಡೆ-ಸ್ಥಳ. ಗ್ರಾಸ-ತಿನ್ನುವ ಪದಾರ್ಥ. (೨೪) ಜರೆಯುವರು-ಅಲ್ಲಗಳೆಯುವರು. ಆಗರ-ಸ್ಥಳ. ಒಲ್ಮೆ-ಮೆಚ್ಚು

ಪರತರದ ರಾಜರ್ಷಿ ನೀನಿದ ।
ಸರಿಯೆಯಾ? ಬಿಡಲೆನ್ನ ಸುಮನೋ ।
ಹರನ ಕಾರಣ ಜೀರಿಹುದು, ಪೇಳಂಜ್ಬದೇಕಿನ್ನು ॥ ೨೪ ॥
ಸುತೆಯು ನುಡಿಯುನು ಕೇಳಿದೊಡೆಕಂ- ।
ಪಿತವದಾದುದು ಕಂಠವಾ ದಂ- ।
ಪತಿಗಳಿಗೆ, ದನಿ ಕುಗ್ಗಿದುವು ದೇಹಾನು ಕಂಪಿಸಿತು. ॥
ಮತಿಯು ವಿಭ್ರಮವಾಯ್ತು, ಮಗಳಾ- ।
ಕೃತಿ ಯಿವಳು ದೇವಾಂಗನೆಯು ಸಂ- ।
ಮ್ಮತಿಸುವಳೆ ಪುಸಿ ನುಡಿಗೆನುತ ೦ತೆಂಪ ನರನಾಥ ॥ ೨೫ ॥
ಉಸಿರಲೇನೆಲೆ ಮಗುವೆ, ಪೇಳಿದ ।
ಬಿಸಜ ಸಂಭವತನುಜ ನೆಮಗಿಂ- ।
ಪಸಮ ಶೋಕೋಕ್ತಿಯನು, ನೀಂ ಪ್ರಡುಕಿರ್ದ ವರನಿನ್ನು ॥
ಅಸುವ ಬಿಡುವನು ವರುಷಕೆಂದನಿ- ।
ಮಿಷ ಮುನಿಯ ನುಡಿ ಪುಸಿಯುದೆಂತೆನೆ, ।
ವಸುಧಿಯೊಳು ಮೈಮರೆದು ಬಿದ್ದಳು ಭರದಿ ಮೃಗನಯನೆ ॥ ೨೬ ॥
ಕಂಡು ಭೂಮಿಪನಾಗ ಗಾಬರೆ- ।
ಗೊಂಡು, ಸಲೆ ಶೈತ್ಯೋಪಚಾರದೊ- ।
ಳಂಡಲೆಯೆ, ಬಿಸುಸುಯ್ಯುತೆದ್ದ ಕಟಕಟ ಯೆಲೆ ವಿಧಿಯೆ ॥
ವಂಡಿಸಲ್ಕೀಪರಿಯ ಪರವೋ ।
ದ್ದಂಡ ತಪ್ಪೇನಾಯ್ತು ಲೇಸೆಲೆ ।
ಪುಂಡರೀಕೋದ್ಭವನರಸಿ ಯೆನಲೆಂದ ನರನಾಥ— ॥ ೨೭ ॥
ಏಕಿನಿತು ಶೋಕಾತಿರೇಕ ವ- ।
ನೇಕ ಮಹರಾಜರುಗಳಿರುತಿರೆ, ।
ಕಾಕು ದೈವಿಯದೇಕೆ? ಶ್ಯಪಿಸುವದೇಕೆ? ಕಮಲಜನ ॥

---

(೨೫) ಕಂಪಿತವದಾದುದು—ನಡುಗಲಾರಂಭಿಸಿತು. ವಿಭ್ರಮ—ವಿಶೇಷ ತಿರು ಗೋಣ. ಅಂಗನಾ—ಸ್ತ್ರೀ. (೨೬) ಬಿಸಜಸಂಭವ ತನುಜ—ನಾರದ.

ಸಾಕು ಬಿಡು ಮನ ತಾಪ ವೆಂದೆನ– ।
ಲಾ ಕಮಲ ಮುಖಿ ನಿಜ ಪಿತಗೆ ತೆಗೆ ।
ಯೀಕುಜೋಽಧವ ನೆನ್ನ ಪೊರೆವವರಿಲ್ಲೆ ಸಂಕಟದಿ ॥ ೨೮ ॥
ತಂದೆ! ಸರ್ವೇಂದ್ರಿಯದಿ ಮನವೇ- ।
ಲೆಂದು ಜಗ ಸಾರುತಿರೆ, ಸನ್ಮನ– ।
ದಿಂದ ಪತಿಯೆಂದವನ ಬಿಡೆ, ಪ್ರಾಧಾನ್ಯವೇನದರ ॥
ಕುಂದು ಕೊರತೆಯನೆಣಿಸುವದು, ಮನ- ।
ಪೊಂದಿಸದ ಮುನ್ನಲ್ಲವೇ ಪೇ– ।
ಳೆಂದವಳ ನುಡಿಗೇಳ್ದು ಕರುಣದೊಳೆಂದ ನರನಾಥ— ॥ ೨೯ ॥
ದೋಷಗಳ ತಿಳಿ ತಿಳಿದು ಬಿಡದಲೆ ।
ಪೋಷಿಸೆಂದೆನ್ನುವದು ದೇವಗೆ ।
ಲೇಸೆ? ದುರ್ಬೀಜವನು ಭೂಮಿಯೊಳಿಟ್ಟು, ಸುಫಲಗಳ ॥
ಆಸಿಸಿದೊಡ್ಡೈದುವವೆ? ಪೇಳ್, ಕಮ– ।
ಲಾಸನನ ತಪ್ಪೇನದೆನ್ನೀ ।
ಭಾಷೆಯೊಂದನು ಕೇಳೆನಲು, ನುಡಿದಳು ಸರೋಜಮುಖಿ ॥ ೩೦ ॥
ಏನಿದೀನುಡಿ ತಾತ! ಕೃತ ಕ– ।
ರ್ಮಾನುಸಾರವು ಬುದ್ಧಿ, ಪೂರ್ವದಿ ।
ತಾನು ಗೈದನುಚಿತ ಸುಕರ್ಮದೊಲೀ ಧರಿತ್ರಿಯಲಿ ॥
ಸ್ವಾನುಭವಗೊಳ್ಳಲ್ಕೆ ಬಿಡುವುದೆ? ।
ಭಾನು, ಶಶಿ, ದೇವಾದಿ ದೈತ್ಯರು ।
ಕಾನನದೊಳಿಹ ಯೋಗಿಗಳು, ಕರ್ಮಾನುಸಾರಿಗಳು ॥ ೩೧ ॥
ಇಂತು ದೇವಾಸುರರು ಕರ್ಮದೊ– ।
ಳಾಂತಿರಲು, ಮರ್ತ್ಯರಿಗೆ ಬಿಡುವುದ– ।
ದೆಂತು? ಪಡೆದೊಡೆ ನಿನಗೆ ಕರ್ಮವ ಬಿಡಿಸಲಳವಿಹುದೆ? ॥

---

(೨೯) ಪ್ರಾಧಾನ್ಯವು–ಹೆಚ್ಚಿನ ಅಧಿಕಾರವು. (೩೧) ಕೃತಕರ್ಮಾನುಸಾರವು ಬುದ್ಧಿ-ಪೂರ್ವದಲ್ಲಿಮಾಡಿದಂಥ ಪಾಪಪುಣ್ಯದಂತೆ ಬುದ್ಧಿ ಹುಟ್ಟುವದು

ಚಿಂತಿಸುವದೇಕೆನ್ನ ಮನಸಿನ ।
ಕಾಂತನನು ಬಿಟ್ಟುಳಿದ ಧರಣೀ- ।
ಕಾಂತರೆನಗಗ್ರಜರು, *ಕ್ಷಮಿಸೆನ್ನಾಗ್ರಹವನೀಗನು ॥ ೩೨ ॥

ತರಳೆಯಾಡಿದ ವಚನಕಾ ಭೂ- ।
ವರನು, ಚಿಂತಾತುರದಿ ವ್ಯೆಮರೆ- ।
ದಿರಲು, " ಕೇಳ್ ಭೂಪಾಲ ನಿನ್ನಾತ್ಮಜೆಯ ಚರಿತವನು ॥
ಮರೆಯದಿರು ಸಂಕಟದಿ ಪೊರೆವವ- ।
ಳಿರಲು ಕಮಲಾಸನನ ನಿಜಸತಿ ।
ಬರಿದೆ ಚಿಂತೆಯದೇತಕೆಂ " ದಶರೀರ ವಾಣಿಯನು ॥ ೩೩ ॥

ಕೇಳಿ ಧೈರ್ಯದಿ— ತನುಜೆ ನಿನ್ನ ವಿ- ।
ಶಾಲ ಚರಿತವ ಮರೆದು ಮಗಳಿಗೆ ।
ಪೇಳ್ವ ನುಡಿ ಪೇಳಿದೆನು ಲೋಕದ ಮರುಳ ಮನುಜರೊಲು ॥
ಮೇಳಿಪುದು ನಿನ್ನಿಚ್ಛೆ, ತದ್ಭೂ- ।
ಪಾಲ ಕುವರಗೆ ಕೊಡುವೆ, ಸುಖದಿಂ ।
ಕಾಲಗಳೆ ಯೆನ್ನೆನಲು ವಿಕಸಿತವಾಯ್ತು ವದನಾಬ್ಜ ॥ ೩೪ ॥



ಇತಿ ಶ್ರೀ ಕವಿ ಕಿಂಕರ ತೊರವೆ ರಾಘವಾಂಕ ಕವಿ ವಿರಚಿತ

**ಸತಿ ಸಾವಿತ್ರಿ ಮಹಾತ್ಮೆಯೋಳ್ ಷಷ್ಠೋಽಧ್ಯಾಯ**

ಪದ ೧೬೪ ಕ್ಕೆ ಮಂಗಲಮಸ್ತು.



(೩೩) ಅಶರೀರವಾಣಿ-ಆಕಾಶದಲ್ಲಿ ಆಗುವ ಶಬ್ದ. (೩೮) ಮೇಳಿಪುದು-ಸಿದ್ಧಿಸುವದು. ವಿಕಸಿತವಾಯ್ತು-ಅರಳುವದಾಯ್ತು- ವದನ-ಮುಖ.

## -: ಸಪ್ತಮೋಧ್ಯಾಯ :-

ಪಂ. ಸೂ. ಪ.|| ಸುತೆಯು ಮನದಿಚ್ಛೆಯೊಲು ಧರಣೀ ।
ಪತಿ ದ್ಯುಮತ್ಸಾಧಿಪಗೆ, ತನುಜೆಯ ।
ಪಥಿಕರಿಸೆ ಮನಮೊಪ್ಪಿಸಿದ ವಿಪಿನದೊಳು ಜೋಧಿಸುತ ॥
ಅವಧರಿಪುದಜ ಸಂಭವನೆ ಭೂ- ।
ಧವನು ರಾಜ ಪುರೋಹಿತಗೆ ನೆರೆ ।
ವಿವರಿಸೀ ವೃತ್ತಾಂತವನು, ಸುಮುಹೂರ್ತವನು ತೆಗಿಸಿ ॥
ತವಕದಿಂ ಸಚಿವನಿಗೆ— ಪೋಗೆಲೊ ।
ಪವನವೇಗದೊಳಾದ್ಯುಮತ್ಸನ ।
ಕುವಲಯಾಂಘ್ರಿಗೆ ನಮಿಸಿ, ಪೇಳಾಂ ಬರೆನೆನುತ ನಯದಿ ॥ ೧ ॥
ಇಂತು ರಾಜಾಜ್ಞೆಯನು ಶಿರದೊಳ- ।
ಗಾಂತು ಪೋದೊಡೆ ಸಚಿವನಾ ಭೂ- ।
ಕಾಂತ ಮಿಕ್ಕೆಣ್ದೆಶೆಯ ಭೂಪಾಲರಿಗೆ ಪತ್ರಗಳ ॥
ಅಂತರಿಸದಲೆ ಕಳುಹಿ, ತನ್ನ ಪು- ।
ರಾಂತವೆಲ್ಲವ ಸಿಂಗರಿಸಲ- ।
ತ್ಯಂತ ಬಗೆಯಿಂ ಪೇಳ್ದನಸದಳವಾಗೆ ವಿಬುಧರಿಗೆ ॥ ೨ ॥
ಕಳೆಯೆ ಪುರ-ಶೃಂಗಾರದಲಿ ದಿನ- ।
ಗಳನು ಭೂಪ ದ್ಯುಮತ್ಸಸೇನನ ।
ಬಳಿಗೆ ಕಳುಹಿದ ಸಚಿವ ಬಂದಷ್ಟಾಂಗದಿಂ ನಮಿಸಿ— ॥
ತಿಳುಹಿದೆನು ತಾವ್ ಪೇಳಿದುದನದ- ।
ಕೊಳಿತೆನುತಲಾದರಿಸಿದರು ವಸ ।
ದಳವವರ ಸದ್ಗುಣವ ನೆರೆ ಪೊಗಳಲ್ಕೆ ಯೆನಗೆಂದ ॥ ೩ ॥
ಕೇಳಿ ಸಚಿವನ ನುಡಿಯ ತೋಷವ ।
ತಾಳಿ ನಿಯಮಿತ ಪರಿಜನರ ಸ- ।
ಮ್ಮೇಳದಲಿ, ಶುಭ ದಿನದಿ ಬರೆ ಭೂಪಾಲನಾಶ್ರಮಕೆ ॥

---

(೧) ಪವನ-ಗಾಳಿ. ಕುವಲಯ-ನೈದಿಲೆ. (೨) ಇಂತು-ಈ ಪ್ರಕಾರ.

ಬಾಲ ಲೀಲೆಯೊಳಾಡುತಿಹ ಮುನಿ- ।
ಬಾಲಕರ ಮಧ್ಯದೊಳು ಪೊಳೆವ ವಿ- ।
ಶಾಲಲೋಚನ ಕುವರನೋರ್ವನ ಕಂಡು ನೃಪ ಮನದಿ— ॥ ೪ ॥
ಆರಿವನು, ಚಂದ್ರಮನೊ? ಪೇಳ್ ಶಕ- ।
ಟಾರಿ ಸುತ ಮನಸಿಜನೊ? ಮಂದರ ।
ಧಾರಿ ಮಾನವ ರೂಪದಿಂದೈದಿಹನೊ? ಭೂಸ್ಥಳಕೆ ॥
ಮೀರಿದವರಿನ್ನಾರು ಸುಗುಣಾ ।
ಕಾರ ಸೊಬಗಿನೊಳಿವನ ಕಂಡಿ- ।
ನ್ನಾರು ಮೋಹಿಸದಿರರು? ಲೋಕತ್ರಯದ ಮನುಜರೊಳು ॥ ೫ ॥
ಥಳ ಥಳಿಪ ಸುಕಪೋಲವನು ಚಂ- ।
ದಳಿರ ಪೋಲ್ ಪೊಳೆವಧರವನು ಕ- ।
ಣ್ಮಲರ ಯುಗ್ಮಂಗಳನು, ಕುಡಿ ಹುಬ್ಬುಗಳ ಶಶಿಸಣೆಯ ॥
ಜಲಜ ಕರಯುಗಗಳನು, ಸೃಜಿಸ- ।
ಲ್ಕಲರಿಜನಿಗಾಯುಷ್ಯವೆಷ್ಟದ- ।
ರೊಳಗೆ ಪೋದುದೊ! ತಿಳಿಯದೆನಗೆಂದೀಕ್ಷಿಸುತಲವನ— ॥ ೬ ॥
ಇವನಳಿಯನಾಗಿರ್ದೊಡಾತ್ಮಜೆ ।
ಭವಣಿಯಿಂ ಪರಿತಾಪಗೊಂಡೀ ।
ಭುವನದಲಿ ತಿರಗಿರ್ದುದಕೆ ಫಲವಾಯ್ತು, ಮುನಿ-ಸುತರ ॥
ನಿವಹಕೊಪ್ಪುವನಲ್ಲ, ಭೂಪರ ।
ಕುವರರೊಳಿಹ ಶುಭ ಚಿನ್ಹೆಗಳು ತವೆ- ।
ತವಿಸಿಹವು ಸರ್ವಾಂಗದೊಳಗಾರವನ ಕರೆ ಯೆಂದ ॥ ೭ ॥
ದೊರೆಯ ಪರಿಜನರಾರ್ಭಟಕೆ ಬಹು ।
ಬೆರಗು ಗೊಂಡೀಕ್ಷಿಸುತ ಲಿರುವಾ ।
ವರ ಕುಮಾರನ ಕರೆಯೆ ಸಂಪ್ರೀತಿಯೊಳು ಚರನೋರ್ವ ॥

(೫) ಶಕಟಾರಿ-ಕೃಷ್ಣ. (೬) ಕಪೋಲ—ಗಲ್ಲ. ಚಂದಳಿರು—ಕೆಂಪುತಳಿರು
ಅಲರ್—ಹೂವು. ಅಲರಿಜ-ಬ್ರಹ್ಮ. (೭) ಭವಣಿ-ಕಷ್ಟ. ತವೆ-ಚನ್ನಾಗಿ.

ಸರಸ ನಸುಹಾಸ್ಯದೊಳು ಪರಮೋ- ।
ತ್ಕರುಷ ಬೀರುತಲಾಗಮಿಸಿ ಪದ ।
ಸರಸಿಜಕೆ ಶಿರವಾಗಿ ಬೆಸಗೊಂಡನು ಧರಾಧಿಪನ ॥ ೮ ॥
ಅವನಿಪತಿ ನೀವ್ ಬರಲು ನಮ್ಮೀ ।
ಭುವನ ಪರಿಶೋಭಿಸಿತು, ಕುಪಥದ ।
ವಿವಿಧತಾಪವ ಸಹಿಸುತೈದಿಪುದೇಕೆ? ಕರುಣಿಸಿದೊಡೆ ॥
ಅವಧರಿಸದಿರ್ದಪರೆ? ಧರಣೀ ।
ಧವರ ಮಹದಾಜ್ಞೆಯನು, ಶಿಖಿ ಮೊಗ- ।
ಕುವಲಯವ ಕುಂದಿಸಿದೆ, ವಿಶ್ರಮಿಪುದು ನಿಜಾಶ್ರಮದಿ ॥ ೯ ॥
ಬಾಲಕನ ಸುಲಲಿತ ಸುವಾಕ್ಯವ ।
ನಾಲಿಸುತ ಸಂಪ್ರೀತಿಯಿಂ— ನಿ- ।
ಮ್ಮಾಲಯವದೆಲ್ಲಿಹುದು? ಪಡೆದಿಹ ಪುಣ್ಯತಮರಾರು? ॥
ಪೇಳಿ ನೀ ತೋಷಾಮೃತವ ದಯ ।
ಪಾಲಿಸಿದೊಡೆಮ್ಮಖಿಲ ಶ್ರಮ ನಿ- ।
ರ್ಮೂಲಮಪ್ಪುವದೀಗೆನಲು ನುಡಿದನು ಸುನಳಿನಾಕ್ಷ ॥ ೧೦ ॥
ಭೂಲತಾಂಗಿಪ ಕೇಳು, ಪೂರ್ವದಿ ।
ಶಾಲದೇಶವ ಪಾಲಿಸಿದ ಭೂ- ।
ಪಾಲನಾದ ದ್ಯುಮತ್ಸತನುಸಂಭೂತನಾರಾಜ್ಯ ॥
ಕಾಲವಶದಿಂ ಪೋಗೆ, ವಿಪಿನದಿ ।
ಕಾಲಗಳೆಯುತ ಜನನಿ ಜನಕರ ।
ಪಾಲಿಸುವೆ, ವೃದ್ಧಾಂಧರಾಗಿಹರೆನಲು ನೃಪ ಮರುಗಿ— ॥ ೧೧ ॥
ಒಳ್ಳಿತೆಲೆ ಸುಕುಮಾರ ತತ್ಪಿತ- ।
ನೆಲ್ಲಿಹನು? ಮದ್ರಾಧಿಪನು ನಾಂ ।
ಬಲ್ಲೆ ನಿಮ್ಮಯ್ಯನನು, ನಡೆಯೆಂದೆನುತಲಾಶ್ರಮಕೆ. ॥

(೯) ಧವ-ಪತಿ. ಶಿಖಿ-(ಬಿಸಲಿನ) ಕಾವು. (೧೧) ಲತಾ-ಬಳ್ಳಿ. ತನು-ಶರೀರ. ವೃದ್ಧಾಂಧರು-(ಜನನಿ) ಮುದಿಕೆಯೂ, (ತಂದೆ) ಕುರುಡನೂ.

ಬಲ್ಲ ಮಂತ್ರಿ ಪುರೋಹಿತರ ಕೂ- ।
ಡಲ್ಲಿ ಗೈತಂದಾದ್ಯುಮತ್ಸನ ।
ಪಲ್ಲವಾಂಘ್ರಿಗೆ ನಮಿಸಿದೊಡೆ, ಶಾಲೇಶನಿಂತೆಂದ— ॥ ೧೨ ॥
ರಾಯ! ಕಟ್ಟಡವಿಯ ಕುಪಥದಲಿ ।
ಘಾಯ ಬಟ್ಟೆನ್ನೆಡೆಗೆ ನೃಪರ ನಿ- ।
ಕಾಯ ಮಣಿ ನೀಂ ಬಹರೆ, ವಿಪಿನದೊಳಿರ್ಪ ನನ್ನಿಂದ ॥
ಕಾರ್ಯವೇನಪ್ಪುವದಿದನುಚಿತ ।
ವಾಯಿತೆನಗಿಂದೀ ಗನಿತು ಬಲು ।
ಸಾಯಸದೊಳೈದಿರುವುದೇಕೆನೆ, ನುಡಿದ ನಶ್ವಪತಿ ॥ ೧೩ ॥
ಶಾಲದೇಶಾಧಿಪತಿ ಕೇಳ್ ಮಮ ।
ಬಾಲೆಯಳ ಮನವೀಗ ನಿನ್ನಯ ।
ಬಾಲಕನ ಸದ್ಗುಣ ಶುಭಾಂಗಕೆ ಮೆಚ್ಚಿದುದರಿಂದ ॥
ಮೇಳಿಸಲ್ಕೀರ್ವರ ವಿವಾಹ ಸು ।
ಕಾಲದಲಿ ಬಂದಿರುವೆನಾಂ ದಯ ।
ಪಾಲಿಸುವುದೆನ್ನಿಚ್ಛೆ ಯಿದನೆನಲೆಂದನವನೀಶ ॥ ೧೪ ॥
ಮದ್ರದೇಶಾಧಿಪತಿ ಕೇಳ್, ದಾ- ।
ರಿದ್ರ್ಯ ವಶರಾಗೀಗ ಲೋಕದ ।
ಕ್ಷುದ್ರರೊಳಗತಿ ಕ್ಷುದ್ರರಾಗೀ ಘೋರ ಕಾಡಿನೊಳು ॥
ಇದ್ದಿಮಗೆ, ಸೌಖ್ಯಾನುಭವದ ಸು- ।
ಭದ್ರೆ ಸತಿಸಾವಿತ್ರಿ ಮನಮೆಂ- ।
ತುದ್ರವಿಸಿತಾಶ್ಚರ್ಯ ತೋರುವದೆನಗೆ ಯೀ ನುಡಿಯು ॥ ೧೫ ॥
ಸರಸ ವಸ್ತ್ರಾಭರಣದಿಂ, ಪರಿ- ।
ಪರಿಯ ಪಕ್ವಾನ್ನಗಳನುಣುತೋ ।
ತ್ಕರುಷದಿಂ, ನೃಪ ಪುತ್ರಿಯಡೊಳಾಡುತಲಿ ಬಳೆದಿರ್ದ ॥

---

(೧೩) ಸಾಯಸ-ಕಷ್ಟ. (೧೫) ಸುಭದ್ರೆ—ಬಳ್ಳೀ ಮಂಗಳಕರಳು. ಉದ್ರವಿಸಿತು-ಅಪೇಕ್ಷಿಸಿತು. (೧೬)ಉತ್ಕರುಷದಿ—ಬಹಳ ಆನಂದದಿಂದ.








ವರ ಕುಮಾರಿಗೆ ವಿಪಿನವಾಸದೊ- ।
ಳಿರಲು, ಮನಮೆಂತೊಲಿದಿತೆಲೆ ಭೂ- ।
ವರನೆ? ಬಂದಿನ್ನಾವ ಸೌಖ್ಯವ ಪಡೆವಳವಳಿಲ್ಲಿ ॥ ೧೬ ॥

ಇರಲು ಮನೆಯೊಂದಿಲ್ಲ, ಹಸಿದೊಡೆ ।
ಸರಸ ಭೋಜನವಿಲ್ಲ, ತೊಡಲೊಂ- ।
ದರಿವೆ ವ್ಯಾಕ್ಯಕೆ ಲಭಿಸದೆಲೆ ಭೂಪಾಲಸಿಂಧವರ ॥
ವರಿಸಿ ಬಂದಿನ್ನಾವ ಸುಖವನು ।
ದೊರಕಿಸುವಳವಳರಿಯೆ ಜೇಡೆಂ- ।
ದರಹು, ಸಮುಚಿತ ಮಪ್ಪುದೆನಗೆನಲೆಂದ ನೃಪತಿ ॥ ೧೭ ॥

ಏನಿದೀನುಡಿ! ವಿಧಿವಶದಿ ಧನ ।
ಹೀನನಾದೊಡೆ, ಪುಣ್ಯ-ಧನಪತಿ ।
ಗೇನು ಭಯ? ರವಿಯಂಜುವನೆ ಗಾಢಾಂಧಮುಸುಗಲ್ಕೆ? ॥
ಜ್ಞಾನಿಗಾ ಕ್ಷಣಭಂಗುರದ ಧನ ।
ಹೀನತೆಯ ಭಯವೇನು? ಕನ್ಯಾ- ।
ದಾನ ಮಾಡಲ್ಕೇಕೆ? ಧನ ನಿರ್ಧನಿಕರೆಂಬಾತೆ ॥ ೧೮ ॥

ಕೊಂಡುಕೊಳ್ಳಲು ಕೊಡಬಹುದೆ? ಭೂ- ।
ಮಂಡಲಾಧಿಪ! ಮಗಳನಿವರು ಪ್ರ- ।
ಚಂಡ ಧನಯುತರೆನುತ, ಗುಣ-ಕುಲ-ರೂಪ-ಯೌವನವ ॥
ಕಂಡುಕೊಳ್ಳದೆ, ನಿರ್ಧನಿಯು ಗುಣ ।
ಮಂಡಿತನು, ಪುಣ್ಯಾತ್ಮ, ಪರಮೋ- ।
ದ್ದಂಡ ಸತ್ಕೀರ್ತಿಯುತ, ಲಕ್ಷಣೆ, ಯಾದೊಡನುಚಿತವೆ? ॥ ೧೯ ॥

ತರಣಿ ಶಶಿ ಜೀವಿಸುವ ಪರಿಯಂ- ।
ತರದೊಳಿಹ ಸಂಬಂಧವನು, ಕ-
ಡ್ಡರಿದು ಕ್ಷಣಮಾತ್ರದೊಳಗಡಗುವ ಸಿರಿಯು ಸೊಗ ನೋಡಿ ॥

---

(೧೭) ಲಭಿಸದು-ಸಿಗದು. ಅರಹು-ತಿಳಿಸು. (೧೮) ಗಾಢಾಂಧ-ಅತಿಶಯವಾದ ಕತ್ತಲೆ. ಮುಸುಗಲ್ಕೆ-ಮುಚ್ಚಲಾಗಿ. (೨೦) ತರಣಿ ಸೂರ್ಯ.

ಜರೆಯುವರೆ? ಪುಣ್ಯಾತ್ಮರಸು ಧನ ।
ದೊರೆತನಗಳಿಲ್ಲೆನುತ ನನಗಿದು ।
ಸರಸ ಮಪ್ಪದು ರಾಯ ಮಗಳಿಚ್ಛೆಯನು ಪೂರೈಸು ॥ ೨೦ ॥

ಲಾಲಿಸಜ ಸಂಭವನೆ ಧರಣೀ ।
ಪಾಲನೀ ನುಡಿಗಾ ದ್ಯುಮತ್ಸ ನೃ- ।
ಪಾಲ, ಕಡು ಸಂತೋಷದಿಂದೆಲೆ ಭೂಪ ನಾನಿನ್ನು ॥
ಪೇಳಲರಿಯೆನು, ತವಕುಮಾರಿಯು ।
ಕಾಳ ಕಟ್ಟಡವಿಯೊಳು ಕಷ್ಟದಿ ।
ಬಾಳಲೊಪ್ಪಿದೊಡೀವುದೆನಲಿಂತೆಂದ ನಶ್ವಪತಿ ॥ ೨೧ ॥

ರಾಯ! ತಾನೈತಂದು ಪತಿಯ ಸು ।
ಕಾಯ, ಸುಗುಣ–ಸ್ಥಿತಿಯ ಸರಸೋ– ।
ಪಾಯದಿಂ ಕಂಡೆನಗೆ ಪೇಳಿದೊಡೀವನದೋಷವುದು ॥
ಘಾಯಮೆನಿಸುವುದೆಂತು ಮಗಳಿಗೆ? ।
ನೋಯುವದು ನೀವೇಕಿನಿತು? ಬಿಸ- ।
ಜಾಯತಾಕ್ಷಿಯ ಪಾಲಿಸೆಂದು ಪುರೋಹಿತನ ಕರೆದು ॥ ೨೨ ॥

ಸರಸವಹ ಸುಮುಹೂರ್ತವನು ತೆಗೆ- ।
ದರುಹಿ ಶಾಲೇಶಂಗೆ, ಪೋಗುವೆ- ।
ವರಮನೆಗೆ ನಾವೆನುತಲೊಡನೈದಿರ್ದ ಪರಿಜನರ ॥
ಬೆರಿಸಿ, ಘೋರಾರಣ್ಯ ಪಥದಿಂ ।
ಬರಲು ಪುರದ ಸಮೀಪದಲ್ಲಿ, ರವಿ ।
ಸರಿದನಪರಾದ್ರಿಯೊಳು ತಾರೆಗಳಡರಿದವು ನಭದಿ ॥ ೨೩ ॥

ಇತಿ ಶ್ರೀ ಕವಿ ಕಿಂಕರ ತೊರವೆ ರಾಘನಾಂಕ ಕವಿ ವಿರಚಿತ

**ಸತಿ ಸಾವಿತ್ರಿ ಮಹಾತ್ಮೆಯೊಳ್ ಸಪ್ತಮೋಧ್ಯಾಯ**

ಪದ ೧೮೭ ಕ್ಕೆ ಮಂಗಲಮಸ್ತು.



## -: ಅಷ್ಟಮೋಽಧ್ಯಾಯ :-

ಸಂ. ಸೂ. ಪ. ॥ ವರಿಸಿ + ಚಿತ್ರಾಶ್ವನನಿರಲ್ಕಾ ।
ಸುರಮುನಿಯು ಪೇಳಿರ್ದ ದಿನ ಬಂ- ।
ದಿರಲರಣ್ಯಕೆ ಪೋಪ ಪತಿಯೊಡನೆದ್ದಳಾ ಸಾಧ್ವಿ ॥
ಬಂದೊಡನೆ ಸಿರಿ-ಮೊಗದಿ ಪರಮಾ- ।
ನಂದ ಬೀರುತ ನೃಪತಿ ಕೇಳರ- ।
ವಿಂದಜೋದ್ಭವ, ಸಕಲ ಪುರವಾಸಿಗಳ ಮನದೊಳಗೆ ॥
ನಂದ ಮಿಗಿಲಾಯ್ತರಸು ಮಗಳ ವಿ- ।
ಬಂಧ ಪರಿಹರಿಸಿದ ಸುಲಕ್ಷಣ ।
ದಂದ ವೆಸಿಯುತ್ತಿಹುದನೀಕ್ಷಿಸುತಾ ನರೇಂದ್ರನಲಿ ॥ ೧ ॥
ಪಸರಿಸಿತು ಕ್ಷಣ ಮಾತ್ರದೊಳಗಾ ।
ವಸುಧಿಪಾಲನ ವಿಕಸಿತದ ಮೊಗ- ।
ಕುಸುಮ ಪರಿಮಳ ಗಂಧ, ರಾಜ ಪುರೋಹಿತನ ದಯದಿ ॥
ಉಸುರಲೆನಗೇಕಾದಿ ಶೇಷನಿ- ।
ಗಸದಳವು ಪುರವಾಸಿಗಳ ಮನ ।
ದಸಮ ತೋಷವ ಲಾಲಿಸೆಲೆ ಮುನಿಮೌಳಿ ಮುಂಗಥೆಯ ॥ ೨ ॥
ಕರೆಸಿ ಮರುದಿನ ನೃಪತಿ ಸಚಿವೇ- ।
ಶ್ವರನ— ವಿಧಿವಶದಿಂದ ವಿಪಿನಾಂ ।
ತರದಿ ದೈನ್ಯಾವಸ್ಥೆಯೊಳಗಿದ್ದಾ ದ್ಯುಮತ್ಸನನು ॥
ಬರಸಿಕೊಂಡಾಡಂಬರದಿ ನಿಜ ।
ಪುರದಿ ಮಗಳ ವಿವಾಹವನು ಬಂ- ।
ಧುರದಿ ಗೈವುದಯೋಗ್ಯ ತಿಳಿಸುವುದಾವೆ ಬರೆವೆನುತ ॥ ೩ ॥
ಧರಣಿಪತಿಯಾಜ್ಞೆಯನು ಕೇಳುತ ।
ಕರೆದು ಬೇಗದೊಳೋರ್ವಮಾತ್ಯನ ।
ನರಹಿ ಬಾ ಶಾಲೇಶಗೀಪರಿ ಯೆನುತ ಬೀಳ್ಕೊಟ್ಟು ॥

---

+ ಚಿತ್ರಾಶ್ವನೆಂಬುದು ಸತ್ಯವಾನನ ಎರಡನೇಯ ಹೆಸರಾಗಿರುವದು.

ಪರಿ ಪರಿಯ ಶೋಭೆಯೊಳು ಗೃಹ ಸಿಂ- ।
ಗರಿಪುದೆಂದಖಿಲ ಪ್ರಜಾಳಿಯು ।
ಮರೆಯದಂತಾ ಪುರದಿ ಹೊಯಿಸಿದನಾಗ ಡಂಗುರವ ॥ ೪ ॥
ಕೇಳುತಾ ಡಂಗುರವ, ತೋಷವ ।
ತಾಳಿ, ಭಿತ್ತಿಯೊಳಾಗ ರನ್ನವ ।
ಪೂಳಿ, ಮಧ್ಯದೊಳತಿ ಮನೋಹರವಾದ ಬೊಂಬೆಗಳ ॥
ಮೇಳವಿಸಿ, ಬಾಗಿಲದಿ ನವತೋ- ।
ರ್ಬಾಳೆತರುಗಳ ತಳಲುಗಳ ಮು- ।
ಕ್ತಾಳಿಗಳ ಮೇಲ್ಕಟ್ಟನೊಳು ಸಿಂಗರಿಸಿದರು ಗೃಹವ ॥ ೫ ॥
ಕತ್ತುರಿಯ ಸಾರಣೆಯೊಳಗೆ ಕೆಂ- ।
ಪೊತ್ತಿ ರಚಿಸಿದ ಕಾರಣೆಯು, ಮನ- ।
ವಿತ್ತು ಪೌರ್ರ್ರ್ರ್ಥೆಯರದರ ಮಧ್ಯದಿ ತೆಗೆದ ಚಿತ್ರಗಳ ॥
ಉತ್ತುಮೋತ್ತುಮ ತರುಲತಾದಿಗ- ।
ಳಿತ್ತನೋಡಿದೊಡತ್ತ ನೋಳ್ಪರ ।
ಚಿತ್ತ ಸಾಲದು, ತತ್ಪುರದ ಪರಿ ಪರಿಯ ಶೋಭೆಯನು ॥ ೬ ॥
ಕಾಣದಾ ಪುರದೊಳಗೆ ದುಃಖದ ।
ತಾಣವತಿ ಶೋಧಿಸಿದೊಡೆಯು, ಕಂ- ।
ಡೋಣಿಯಲಿ ಶುಭ ಚಿನ್ಹಗಳ ಶುಭವಾರ್ತೆಗಳ ನುಳಿದು ॥
ಮಾಣದೆಸಗಿದರಿನಿತೆರಡು ದಿನ ।
ಸಾನುರಾಗದೊಳನಿತರೊಳಗಾ ।
ಕಾನನಕೆ ಕಳುಹಿರ್ದವಾತ್ಯನು ಬಂದು ನೃಪನೆಡಿಗೆ ॥ ೭ ॥
ವಂದಿಸುತ— ಕೇಳ್ ಜೀಯ ನೀವ್ ಪೇ- ।
ಳ್ದಂದ ಕತಿ ಹರುಷಿಸುತಲತ್ಯಾ- ।
ನಂದದಿಂದೊಪ್ಪಿದಪೆನೆಸುತ ಪೇಳ್, ನಿಮ್ಮ ನೃಪನೆಂದು ॥

---

(೫) ಭಿತ್ತಿ—ಗೋಡೆ. ರನ್ನ—ರತ್ನ. ಬೊಂಬೆ—ಗೊಂಬೆ. (೬) ತರು-ಗಿಡ
(೭) ತಾಣ—ಸ್ಥಾನ. ಮಾಣದೆ-ಬಿಡದೆ. ಅನುರಾಗ-ಪ್ರೀತಿ.

ತಂದು ಫಲ-ಮೂಲಗಳ ನಾದರ |
ದಿಂದಲುಪಚರಿಸಿದರು, ಪೇಳ- |
ಲ್ಕಿಂದಿಹುದೆ ಮನ್ಮನಕವರ ಸುಗಣಸ್ವಭಾವಗಳ ॥ ೮ ॥
ನುಡಿದವಮಾತ್ಯನ ವಚನಕೇಳ್ದಾ |
ಪೊಡವಿ ಪತಿ ದರಹಾಸದಿಂ ಬಹು |
ಕಡಗರದಿ ಪೊಂದೇರ ಹಯ ಸಾರಥಿಯನಳವಡಿಸಿ ||
ಮಡದಿ ಸುತೆ ಸಾವಿತ್ರಿ ಪರಿಜನ- |
ರೊಡನೆ ವಿಪಿನಾಂತರಕೆ ತಾಂ ಪೊರ- |
ಮಡಲು, ಬೆಂಬತ್ತಿದುದು ಪುರಜನವಾಗಲವಸರದಿ || ೯ ||
ದೇಶ ದೇಶದ ಪಾರ್ವರತಿ ಸಂ- |
ತೋಷದಿಂದಧಿರಾಜ ಮದ್ರಾ |
ಧೀಶ ತನು ಸಂಭವಳ ವೈವಾಹಿಕ ಮಹೋತ್ಸವವ ||
ದೂಷಿಪರೆ? ದಕ್ಷಿಣೆ ಸುಭೋಜನ- |
ಕಾಶಿಸುವದೆಮಗನುಚಿತವೆ, ಪುರ- |
ವಾಸಿಗಳ್ಗಾಮಂತ್ರಣವು ನಮಗೇಕೆನುತ ಬರಲು ॥ ೧೦ ॥
ತರ ತರದ ವಾದ್ಯಗಳ ರಭಸದಿ, |
ವರ ಸುಮಂಗಲೆಯರ ಸುಹಾಸ್ಯದಿ, |
ಪರಮ ತಾಪಸರುಶಿರ್ವ* ಘನತರ ವೇದ ಘೋಷದಲಿ ||
ಮೆರೆದುದಾವನ ವನಿತರೊಳ್ ವಧು- |
ವರರ ಶಿಷ್ಟಾಚಾರ ನಿಯಮದಿ |
ಕರೆದು ತಂದುಚಿತಾಸನದಿ ಕುಳ್ಳಿರಿಸಿ ಮುನಿನಿಕರ ॥ ೧೧ ॥
ಪಿಡಿದುದಂತಃಪಟವನೀರ್ವರ |
ನಡುವೆ, ಮಂತ್ರಾಕ್ಷತೆಗಳನು ಬಹು |
ಕಡಗರದಿ ಸುಮುಹೂರ್ತದಲಿ ಚಲ್ಲಿದೊಡನಮರಗಣ ||

---

(೯) ವರಹಾಸ-ಕಿರಿನಗೆ ಅಳವಡಿಸಿ-ಸಿದ್ಧಪಡಿಸಿ. (೧೦) ಪಾರ್ವರು-ಬ್ರಾಹ್ಮಣರು. ವೈವಾಹಿಕ-ಲಗ್ನಕ್ಕೆ ಸಂಬಂಧಿಸಿದ. (೧೨)ಅಮರರು-ಸುರರು

ಒಡನೆ ಪೂ-ಮಳೆ ಗರಿದುದಾ ನವ।
ಕಡು ಚಲುವ ದಂಪತಿಗಳನುದಿನ।
ಪಡೆಯಲೆಂದಾನಂತ ಸುಖಸಾಯುಜ್ಯವಿಹ-ಪರದಿ ॥ ೧೨ ॥

ನಡೆದುದಿನಿತುತ್ಸವವು ಘನ ಕ-।
ಟ್ಟಡವಿಯಲಿ ವೇದೋಕ್ತದಿಂ, ಬಹು।
ನುಡಿಯಲೇನದನಲ್ಲಿ ಕೂಡಿರ್ದಖಿಲ ಭೂ-ಸುರರ ॥
ಕಡು ಮುದವ, ಕೋಲ್ಮಿಂಚಿನಂದದೊ-।
ಲಡಗಿದವು ನಾಲ್ಕಾರು ದಿನ, ಜನ-।
ರೊಡೆಯ ಮದ್ರಾಧೀಶ ನಿಜ ಪುರಕ್ಕೈದಬೇಕೆನುತ ॥ ೧೩ ॥

ಬಂದ ಪರಿಜನಕೆಲ್ಲ ಪೇಳಿದ—।
ನಿಂದು ಮದ್ರಕೆ ಪೋಗುವದು ನಾ-।
ವೆಂದು, ಸತಿಯೊಡಗೂಡಿ ಬಂದಾತ್ಮಜೆಯ ಸಮ್ಮುಖದಿ— ॥
ಇಂದು ಪೋಗುವೆವಾವು, ಪುರಕಾ-।
ನಂದದಿಂದತ್ತೆಯನು ಪತಿ ಮಾ-।
ವಂದಿರನು ಮನಗೊಟ್ಟು ಸೇವಿಸುತಿರ್ಪುದನುದಿನವು ॥ ೧೪ ॥

ಪತಿಯೆ ಪರದೇವತೆಯು, ಸತಿ-ಸ-।
ದ್ಗತಿಯು ನಿಜಪತಿಸೇವೆ, ಮಿತಿಯಿ-।
ಲ್ಲತಿ ಶುಲಭ ಸೋಪಾನ ಮುಕ್ತಿಗೆ ಮೂಲ ಮಾರ್ಗವದು ॥
ಸುತೆಯೆ ಕೇಳ್ ಸನ್ಮನದೊಳಾ ಪತಿ-।
ವ್ರತೆಯರೀ ಮೂಜಗದಿ ಬಾಳುವ।
ರತಿ ಮುದದೊಳತ್ಯಂತ ಸೌಭಾಗ್ಯವನು ಪಡೆಯುತಲಿ ॥ ೧೫ ॥

ಪರಿಪರಿಯೊಳಾವರ ಕುಮಾರಿಗೆ।
ಯರಹುತಲಿ ಸತಿ ಪತಿಗಳಿಬ್ಬರು।
ಪರಮ ಪಾತಿವೃತ್ಯದಗಣಿತ ಮಹಿಮೆಯನು ಬಿಡದೆ ॥

---

(೧೨) ಸಾಯುಜ್ಯ-ಮುಕ್ತಿ. (ಮೋಕ್ಷ) (೧೪) ಸೇವಿಸು-ಸೇವೆಮಾಡು.
(೧೫) ಪರ-ಶ್ರೇಷ್ಠವಾದ. ಸೋಪಾನ-ಸಾವಟಿಗೆ. ಮೂಲ-ಮುಖ್ಯ.

ಕುರುಡನಾದ ದ್ಯುಮತ್ಸೇನನ ।
ಚರಣಕರ್ಪಿಸುತವಳ ಪೋಗುವೆ- ।
ವರಮನೆಗೆನಾವೆನುತ ಶಿರವಾಗಿದರು ಪದಯುಗಕೆ ॥ ೧೬ ॥
ವಂದಿಸಿದ ದಂಪತಿಗಳನು ಸಾ- ।
ನಂದದಿಂದಾಶೀರ್ವದಿಸಿ ಜನ ।
ವೃಂದದೊಡನನುಸರಿಸಿದನು ಶಾಲೇಶ ಕೆಲವಡಿಯ ॥
ತಂದೆತಾಯ್ಗಳು ರಾಜ್ಯ ಸುಖವೆನ- ।
ಗಿಂದು ಬಯಲಾಯ್ತೆನುತಲಾ ಪೂ- ।
ರ್ಣೇಂದು ಮುಖಿ ಸಾವಿತ್ರಿ ಮರುಗದೆ ಮಂದಹಾಸದೊಳು ॥ ೧೭ ॥
ಅಪ್ಪಿ ತಾಯ್ತಂದೆಗಳ ಮುದದಿಂ- ।
ದಿರ್ಪೆ ನಾ, ನೀವರೆಗೆ ಕಾಯ್ದೆ- ।
ನೊಪ್ಪಿಸಿದಿರೀಗತ್ತೆಮಾವಂದಿರಿಗೆ ಪತಿ ಪದಕೆ ॥
ತಪ್ಪದಲೆ ಕರ್ತವ್ಯವನು, ಬಹು ।
ತೃಪ್ತಿಯಿಂ ಕಾಲವನು ಕಳೆಯುತ- ।
ಲಿರ್ಪುದಿನ್ನನುದಿನದೊಳೆಂದೆರಗಿದಳು ಭಕುತಿಯಲಿ ॥ ೧೮ ॥
ತೆರಳಿದೊಡನತ್ತವರು ನಿಜ ಜನ- ।
ವೆರಸಿ ಬಂದಾಶ್ರಮಕೆ, ಪರಮೋ- ।
ತ್ಕರುಷದಿಂದತ್ತೆಯನು ಪತಿ ಮಾವಂದಿರನು ದಿನದಿ ॥
ಪರಿ ಪರಿಯ ಸೇವೆಯೊಳು ಸೇವಿಸು ।
ತಿರುವಳಾಸಾವಿತ್ರಿಯಾದೊಡೆ ।
ಸುರಮುನಿಯು ಪೇಳಿರ್ದ ಭವಿಷದ್ವಾಕ್ಯವನು ಸ್ಮರಿಸಿ ॥ ೧೯ ॥
ಮೊರೆಯಿಡುವಳಜಸತಿಗೆ ದಿನದೊಳು ।
ಪೊರೆ ಯೆನುತ ಸೌಭಾಗ್ಯವನು ಸತಿ- ।
ಗಿರಪಧಿಕ ಸೌಖ್ಯಾನುಭವವದನುಳಿದು ಲೋಕದಲಿ ॥

---

(೧೭) ಅನುಸರಿಸಿದನು-ಹಿಂಬಾಲಿಸಿದನು. ಬಯಲಾಯ್ತು-ಇಲ್ಲದಂತೆ ಆಯಿತು. (೧೯) ಭವಿಷದ್ವಾಕ್ಯ-ಮುಂದಾಗುವದನ್ನು ಹೇಳಿದ ಮಾತು.

ಕರುಣಿಸದನೊಂದೆನುತ ಪರಿಪರಿ।
ಯೊರಲುವಳು, ದಿನಗಣನೆಯನು ತಾ।
ಮರೆಯದೆಣಿಸುತ ಕಾಲಗಳೆಯುವಳಾಕೆ ವಿಪಿನದೊಳು ॥ ೨೦ ॥
ಇರ್ದೊಡೀಚಿಂತೆಯೊಳು ಕೇಳಾ–।
ಪದ್ಮಲೋಚನೆ, ನೋಳ್ಪರಿಗೆ ನಗೆ।
ಮುದ್ದು ಮುಖವನು ತೋರಿ, ಚಿಂತಿಸುತಿರ್ಪಳಿವಳೆಂಬ ॥
ಸದ್ದ ನಾರಿಗು ತೋರದಲೆ, ಕೂ–।
ಡಿರ್ದಪತಿಗಾದಡೆಯು ಚಿಂತಾ–।
ಬದ್ಧಳಾಗಿರ್ದುದನು ತಿಳಿಸದಲಿರ್ಪಳಾ ಸಾಧ್ವೀ ॥ ೨೧ ॥
ಕಳೆವಳಾ ಸಾವಿತ್ರಿ ದಿನಗಳ।
ನಳಿನಜಾಸನ ಸತಿಯ ಪೂಜೆಯ।
ಸುಳಿಯದಲೆ ಪ್ರತಿದಿನದಿ, ಸೇವಿಸುತತ್ತೆ ಮಾವರನು ॥
ಅಳವೆ ಕಾಲಕೆ! ಪೋಗುತಿರಲಾ।
ಬಳಿಕ ನಾರದ ಪೇಳ್ದ ದಿನ ನಾ–।
ಲ್ಕಳಿದು ವರುಷವದೆರಗಿದೊಡನಾ ಸತಿ ಶಿರೋಮಣಿಯು ॥ ೨೨ ॥
ಪರಮ ತ್ರಿದಿನವ್ರತವ ತಾ ಪಥಿ–।
ಕರಿಸಿ ದಿನ ಮೂರರೊಳಗನ್ನದಿ।
ವಿರಹಿತಳು ತಾನಾಗಿ, ದಿನದಾರಾಧ್ಯ ದೇವತೆಯ ॥
ಸ್ಮರಿಸುತಲೆ ಸದ್ಭಕ್ತಿಯಿಂದಿರು-।
ತಿರಲು, ಕಳೆದುದು ಮೂರು ದಿನ ನಾ–।
ಲ್ಕರಲಿ ದಿನಮಣಿಯುಡರಿದನು ಕಡು ರಭಸದಿಂ ನಭಕೆ ॥ ೨೩ ॥
ಒಡನೆ ವ್ರತದುದ್ಯಾಪನೆಯ ತಾ।
ಬಿಡದೆಸಗಿ ಸುರಗಣಕೆ ತೃಪ್ತಿಯ।
ಪಡಿಸಿ, ಪತಿ ಮಾವಂದಿರಿಗೆ ತನ್ನತ್ತೆಗತಿ ನಯದಿ ॥

---

(೨೦) ದಿನಗಣನೆಯನು–ದಿವಸದ ಲೆಕ್ಕವನ್ನು. (೨೧) ಚಿಂತಾಬದ್ಧಳು–ಚಿಂತಿಸುವವಳು. ಸಾಧ್ವಿ-ಪತಿವ್ರತಾ ಸ್ತ್ರೀ. (೨೩) ಆರಾಧ್ಯ-ಪೂಜಿಸುವ

ಅಡಿಗೆರಗಿ ದರಹಾಸದಿಂದಿರ ।
ಲೊಡನೆ ಪತಿಕರತಳವ ನಾಂತಿಹ ।
ಕೊಡಲಿಯನು ಕಂಡಾಗ ಬೆಸಗೊಂಡಳು ನಿಜಾಣ್ಮನನು ॥ ೨೪ ॥

ಪ್ರಾಣಪತಿ! ಯಿಂದೀಗ ತಮ್ಮ ಪ್ರ- ।
ಯಾಣವೆಲ್ಲಿಗೆ? ಕರಸರೋಜದಿ ।
ತಾಣವೇತಕೆ ಪರಶುವಿಗೆ ದಯವಿಟ್ಟು ಪೇಳುವದು ॥
ಕಾಣೆನಾನಿದರಂತರಂಗವ ।
ಭಾನುವಿನ ಘನದಾತಪದೊಳೀ ।
ಕಾನನವು ಕಾದಿರುವುದೆನಲವನೆಂದ ನಿಜಸತಿಗೆ ॥ ೨೫ ॥

ಇಂದುಮುಖಿ, ಫಲ-ಪುಷ್ಪ-ಕಾಷ್ಟಗ- ।
ಳಿಂದ ವರ್ಜಿತರಾಗಿರುವೆವದ- ।
ರಿಂದಲವುಗಳನಾರ್ಜಿಸಲ್ಕಾರಣ್ಯವನು ಚರಿಸಿ ॥
ಇಂದು ಪೋಗುವೆ ನಾನೆನಲ್ಕರ- ।
ವಿಂದ ಮುಖಿ ದೈನ್ಯೋಕ್ತಿಯಿಂ— ಜೀ- ।
ಡಿಂದು ವನಚರಿಸುವದು, ಪಾಲಿಪುದೆನ್ನ ಬೇಡಿಕೆಯ ॥ ೨೬ ॥

ಕಾಂತ! ನಡಿಸದೊಡೀನುಡಿಯ, ವಿಪಿ- ।
ನಾಂತರಕೆ ನಾಂ ಬಂದು, ವನ- ಭೂ ।
ಕಾಂತೆಯರ ಸುಲಲಿತ ಶುಭಾಂಗದ ಸೊಬಗನೀಕ್ಷಿಸುವ ॥
ಅಂತರಾಶೆಯು ಪೊಂದಿ, ಮನಕ- ।
ತ್ಯಂತ ಮೋದವ ಪಡೆವೆನೆನೆ ಭೂ ।
ಕಾಂತ ಸುತ ಚಿತ್ರಾಶ್ವ ಮೋಹದೊಳೆಂದ ನಿಜ ಸತಿಗೆ ॥ ೨೭ ॥

ಕುಂದಕುಟ್ಮಲ ರದನೆ ಕೇಳ್ ತಾ- ।
ಯ್ತಂದೆಗಳ ವಶನಾಗಿರುವೆ ನಾ- ।
ನಿಂದಿನೀವರೆಗೀಗಲವರಪ್ಪಣೆಯ ಪಡೆಯದಲೆ ॥

---

(೨೪) ಕರತಳ-ಅಂಗೈ. ಆಣ್ಮ-ಗಂಡ. (೨೫) ಪರಶು-ಕೊಡಲಿ.
(೨೬) ಆರ್ಜಿಸಲ್ಕೆ-ಸಂಪಾದಿಸಲಿಕ್ಕೆ. (೨೭) ಅಂತರಾಶೆ-ಮನದ ಇಚ್ಛೆ.

ಇಂದು ನಿನ್ನೊಡಗೂಡಿ ಪೋದೊಡೆ।
"ನಂದನನು ಸತಿಬಂದೊಡನೆ ಯೆ-।
ನ್ನಂದ ಮೀರಿದ" ನೆನುತ ಜರಿವನೊ? ತಾತನದರಿಂದ ॥ ೨೮ ॥
ಕೇಳು ಪಿತನಪ್ಪಣೆಯ ನೆನಲಾ।
ನೀಲಲೋಚನೆಯಾಗ ಶಾಲ ನೃ-।
ಪಾಲನಡಿಗಳ್ಗೆರಗಿ ಮತ್ಪತಿಯೊಡನೆ ನಾನಿಂದು ॥
ಭೂಲತಾಂಗಿಯ ಸೊಬಗ ಕಂಡೆ-।
ನ್ನಾಲಯಕೆ ಮರಳುವೆನು ತಪ್ಪದೆ,।
ಪಾಲಿಸುವುದಪ್ಪಣೆಯ ನೆನಲಿಂತೆಂದ ನರನಾಥ ॥ ೨೯ ॥
ಮೂರುದಿನ ವ್ರತಗೈದು ಕಾಷ್ಟಾ-।
ಕಾರಳಾಗಿಹ ನೀನು ಹಳುವದ।
ಘೋರ ಪಥದಿಂ ಪೋಗಿ ಬಹ ವಿಪುಲಶ್ರಮದೊಳಿನ್ನು ॥
ಪಾರುಗಾಣುವದೆಂತು ಮನದೊಳ-।
ಪಾರ ಬಯಿಕೆಯದಿರ್ದೊಡಘ ಸಂ-।
ಹಾರ ಪೊರೆವನು, ಪೋಗಿ ಬಾ, ತವ ಪತಿಯ ನೊಡಗೂಡಿ ॥ ೩೦ ॥
ಎಂದೊಡತ್ಯಾನಂದದಿಂದರ।
ವಿಂದಮುಖಿ ಮಾವನ ಪದಾಬ್ಜ।
ದ್ವಂದ್ವದಲಿ ಶಿರವಿಕ್ಕಿ ತನ್ನತ್ತೆಯನು ಭಕುತಿಯಲಿ ॥
ವಂದಿಸುತ "ಸೌಭಾಗ್ಯವತಿಯಾ-।
ಗೆಂದೊಡಾ" ಶೀರ್ವಾದವಚನವ।
ಪೊಂದಿ, ಪತಿಯೊಡನಾಗ ಪೊರಮಟ್ಟಳು ವನಾಂತರವ ॥ ೩೧ ॥
ಇತಿ ಶ್ರೀ ಕವಿ ಕಿಂಕರ ತೊರವೆ ರಾಘವಾಂಕ ಕವಿ ವಿರಚಿತ

## ಸತಿ ಸಾವಿತ್ರಿ ಮಹಾತ್ಮೆಯೊಳ್ ಅಷ್ಟಮೋಧ್ಯಾಯ

ಪದ ೨೧೮ ಕ್ಕೆ ಮಂಗಲಮಸ್ತು.

---

(೨೯) ಸೊಬಗು—ಸೌಂದರ್ಯ. (೩೦) ಕಾಷ್ಟ—ಕಟ್ಟಿಗೆ. ಹಳುವ—ಅರಣ್ಯ. ಅಘಸಂಹಾರ—ಪಾಪವನ್ನು ನಾಶಮಾಡತಕ್ಕವನು. (ದೇವರು.)

## -: ಅಥ ನವಮೋಽಧ್ಯಾಯ :-

ಸಾ. ಸೂ. ಪ. ॥ ಪತಿಯೊಡನೆ ವಿಪಿನಾಂತರದಿ ಪ್ರ- ।
ತತಿಯಗೊಳ್ಳುತಲಿರೆ, ಜವನು ತ- ।
ತ್ಪತಿಯಸುವ ಕೊಂಡೊಯ್ಯೆ, ಬೆಂಬತ್ತಿದಳು ಸಾವಿತ್ರಿ ॥
ವಾರಿಜೋದ್ಭವ ಸುತನೆ ಕೇಳಾ ।
ನಾರಿಮಣಿ ಕಟ್ಟಡವಿಯಲಿ ಬಹು ।
ಘೋರ ಕಷ್ಟಗಳಡಸಿದೊಡೆ, ಪೊರಪೊಣ್ಮಿಸದೆ ಸಹಿಸಿ ॥
ಚಾರು ಮುಖಮುದ್ರೆಯೊಳು, ಸೊಗಯಿಪ ।
ತೋರ ಪುಷ್ಪವಿದಾವುದೀ ಫಲ ।
ಭೂರುಹದ ಪೆಸರೇನು? ಪೇಳೆನಗೆನ್ನುವಳು ಬರಿದೆ ॥ ೧ ॥
ಮನದೊಳಾಸಾವಿತ್ರಿ ದೇವಿಯ ।
ವನಜ ಪದಯುಗ್ಮದಲಿ ತನ್ನಯ ।
ತನು-ಮನವನೀಡಾಡಿ ಬೇಡುವ"ಳಿಂದು ಮತ್ಪತಿಯ ॥
ಘನತರದ ಸಂಕಟವ ಕಳೆದೆ- ।
ನ್ನನು ಸು ಸೌಭಾಗ್ಯದೊಳಗಿರಿಸೆಂ "- ।
ದನುನಯದಿ ಶಿರಗೊಡ್ಡಿ ಪರಿ ಪರಿ ಯೊರಲುವಳು ತರಳೇ ॥ ೨ ॥
ದೊರಕಿಸಿದಳಾ ಚಿಂತೆಯೊಳು ತರ- ।
ತರದ ಪೊಸ ಪೂಮಂಜರಿಯ, ರಸ ।
ಭರಿತ ಸುಫಲವ್ರಾತವನ್ನಿತರೊಳು ಚಿತ್ರಾಶ್ವ ।
ಉರುವಲವ ಸಂಗ್ರಹಿಸಿ, ವನದೊಳು ।
ಮರುಗಿ ಪಥದಾಯಾಸದಿಂದುರೆ
ಮಿರುಗುತಿಹ ವಟವೃಕ್ಷವನು ಕಂಡೆಂದ ಸತಿಗಾಗ— ॥ ೩ ॥
ನಡೆ ಯೆಲ್ಲೈ ಕುಲಸತಿ-ಶಿರೋಮಣಿ ।
ತಡೆಯದಾಯ್ತೀರ್ವರಿಗೆ ಶ್ರಮ, ವಿಂ- ।
ಪಡವಿಯಲಿ ವಟವೃಕ್ಷದೀ ನೆಳಲೊಳಗೆ ವಿಶ್ರಮಿಸಿ ॥
ಪಡೆದು ಮನಶಾಂತಿಯನು, ಗಡ ನಿ- ।
ನ್ನೊಡನೆ ನಮ್ಮಾಶ್ರಮಕೆ ಪೋಪ್ಪುದು, ।
ತಡೆದೊಡಾ ತಾಯ್ತಂದೆಗಳು ಕಡು ಮಿಡುಕುವರು ಬರಿದೆ ॥ ೪ ॥

ಪತಿಯ ನುಡಿಯನು ಲಾಲಿಸುತ ಕುಲ ।
ಸತಿಶಿರೋಮಣಿಯಾಗ, ಮನದೊಳ ।
ಗತಿ ವಿಚಿತ್ರ ವಿಚಾರದಿಂ ಸ್ಮೈ ಮರೆಯುತಜ ಸತಿಯು ॥
ನುತಿಸುತಾ ವಟ ವೃಕ್ಷನೆಳಲೊಳು ।
ಪಥದ ವಿಪುಲಾಯಾಸಗಳೆಯಲು, ।
ಪತಿಯೊಡನೆ ವಿಶ್ರಮಿಸಲಾ, ಚಿತ್ರಾಶ್ವ ನಿಂತೆಂದ ॥ ೫ ॥
ಸರಸಿಜಾನನೆ! ಯಿಂದಿನೀವರೆ- ।
ಗಿರದ ಮಸ್ತಕಶೂಲೆ ಯೆನಗಾ- ।
ವರಿಸಿತೇತಕೆ? ಘೋರ ಕಟ್ಟಡವಿಯೊಳು ರಭಸದಲಿ ॥
ತರಹರಿಸೆನಿದಕಾವ ಬಗೆ ಯಾ- ।
ಗಿರಿಜೆಯಾಣ್ಮನ ಶೂಲಹತಿಯನು ।
ಮರಿಸುತಿಹುದೆನಲಾಗ ಗಾಬರಿ ಯಾಗುತಂಗನೆಯು— ॥ ೬ ॥
ಮಲಗುವದು, ಕ್ಷಣಮಾತ್ರ ತೊಡೆಯೊಳು ।
ಪಲವು ಬಗೆಯಾಯಾಸದಿಂ ಬಹು ।
ಬಳಲಿ ಬೆಂಡಾಗಿರುವುದೀ ವೇದನೆಗೆ ಕಾರಣವು ॥
ಕಳವಳಿಪುದೇಕೆನುತ, ಮನದೊಳು— ।
ಉಳಿಯನೀ ಮನದಾಣ್ಮನಿಂದೆಲೆ ।
ನಳಿನ ಮುಖಿ ಸಾವಿತ್ರಿದೇವಿಯೆ, ಕರುಣ ದೋರಿನ್ನು!! ॥ ೭ ॥
ನೋಡು! ನೋಡೌ ತಾಯೆ!! ಮೊಗಸಿರಿ ।
ಬಾಡುತಿದೆ, ಕುಸುಮಾಕ್ಷದಿಂ ಜಲ ।
ತೀಡುತಿದೆ ಸುಕಪೋಲದಲಿ, ತವ ಕರುಣ ಬಯಲಾಯ್ತೆ? ॥
ದೂಡಿ ಕಟ್ಟಡವಿಯೊಳು, ಕಷ್ಟದಿ ।
ನೋಡುವದು ಸಮುಚಿತವೆ? ನಿನ್ನನು ।
ಪಾಡಿ ಪೊಗಳುವ ಪಾದ ಸೇವಕಳಲ್ಲವೇ ನಾನು? ॥ ೮ ॥
ನಿನ್ನ ವರದಿಂ ಪುಟ್ಟಿ, ಪೊಗಳುತ ।
ನಿನ್ನ ನಾಮವ ಹಗಲಿರುಳಿನಲಿ ।
ನಿನ್ನ ಪೆಸರೊಳ್ಮೆರೆವ ಬಾಲೆಯುಳನ್ಯಳೇ ನಿನಗೆ ।

ನಿನ್ನ ಪದಪೂಜೆಯನು ಗೈದಾ- ।
ಪುಣ್ಯವಿಂದೆರವಾಯ್ತೆ ? ಬೇಡಾ- ।
ಪನ್ನ ಜನ ಪೋಷಕಳು ನೀನೆಂದೊರಲುವೆನು ತರಳೆ ॥ ೯ ॥
“ ಲೋಕ ಪಾವನಳಪ್ಪಳೈ ಮಗ- ।
ಳೇಕೆ ಸಂಶಯವಿನ್ನು ನಿನ್ನಯ ।
ಕಾಕು ದೈವವು ಪೋಗಿತೆಂ ” ದಡವಿಯೊಳು ಮತ್ತಿತಗೆ ॥
ಏಕಭಾಷೆಯನಿತ್ತು, ಯೆನ್ನ ನಿ- ।
ರಾಕರಿಪುದೀ ತೆರದಿ ನಿನ್ನ ಪ- ।
ರಾಕಿಗುಚಿತವೆ? ನೋಡೆನುತ ಹಲುಬಿದಳು ಮೃಗನಯನೆ ॥ ೧೦ ॥
ವನಜಸಂಭವಸುತನೆ ಕೇಳಾ ।
ವನದೊಳಾ ಪತಿ*ವ್ರತೆಯು ಮತ್ತಾ- ।
ವನ ಪದಕೆ ಶರಣಾಗತಳು ನಾನಾಗಲೆಂದೆನುತ ॥
ಘನತರದ ದುಃಖಾತಿರೇಕದಿ, ।
ಮನದುಗುಡದಿಂದಾಗಲಾರ್ತ- ।
ಧ್ವನಿದೆಗೆದು ಕೂಗಿದಳು, ಸಿರಿದೇವನನು ಭಕುತಿಯಲಿ ॥ ೧೧ ॥
ಪರಮ ಪುಣ್ಯಚರಿತ್ರ! ಲೋಕೋ- ।
ದ್ಭರಿತ ತ್ರಿಭುವನ ಸೂತ್ರ! ಕರುಣಾ ।
ಕರ ಸುಮಂಗಲ ಗಾತ್ರ! ನಿತ್ಯಪವಿತ್ರ! ಸತ್ಪಾತ್ರ!! ॥
ವಿರಚಿಸೀ ಬ್ರಂಹ್ಮಾಂಡವನು, ಸಂ- ।
ಚರಿಸುತಿಹೆ, ಸಚರಾಚರಂಗಳೊ- ।
ಳಿರುವ ಕರುಣಾಂಬುಧಿಯೆ, ಪೊರೆ ಪತಿಯಸುವ ನೀನಿಂದು ॥ ೧೨ ॥
ವೀರ! ಸಂಕಟ ಹಾರ! ಭಕ್ತಾ- ।
ಧಾರ! ಕರುಣಾಪಾರ! ಪರಮೋ- ।
ದಾರ! ಮುನಿಗಣ ಹಾರ! ಜಗದೋದ್ಧಾರ ಸುವಿಚಾರ!! ॥
ಮಾರನಯ್ಯ! ಖಳಾದಿ ಜನ ಸಂ- ।
ಹಾರ! ಜಗದಾಧಾರ! ಪಾಪವಿ- ।
ದೂರ! ಭವಸಂಹಾರ! ಪೊರೆ, ಸೌಭಾಗ್ಯ ತಿಲಕನನು ॥ ೧೩ ॥

ದೇವ! ಭಕುತರ ಕರುಣದಿಂದಲಿ।
ಕಾವ! ನೆರೆ ಸದ್ಭಾವ! ನಿನ್ನಂ-।
ತಾವ ದಯದೇವರುಗಳಿಲ್ಲೆಂದೊರೆವ ವೇದಗಳ॥
ಭಾವವನು ತಿಳಿದೀಗ ದುಃಖದಿ।
ಜೀವನಾಂ, ಶರಗೊಡ್ಡಿ ಮತ್ಪತಿ।
ಜೀವ ಭಿಕ್ಷೆಯ ನೀಡೆನುತ ಕೈ ಜೋಡಿಸುವೆ ನಿನಗೆ ॥ ೧೩ ॥

ಸಂಕಟದಿ ಭಕುತರನು ಪೊರೆಯುವ।
ಬಿಂಕ ನಿನ್ನೊಳಗಿರ್ದೊಡೆಲೆ ಯಕ।
ಳಂಕ ಮಹಿಮನೆ ನಿನ್ನ ನಾಭಿಸರೋಜದುದಿಸಿರುವ॥
ಪಂಕಜಾಸನ ಸತಿಯ ಪದಯುಗ।
ಕಿಂಕರಳು ನಾನಿರ್ದೊಡಹಿ ಪ-।
ರ್ಯಂಕ ನಿನಗಿನ್ನನ್ಯಳೇ! ಕೈ ಗಾಯೊ ಕರುಣದಲಿ ॥ ೧೪ ॥

ಬೇಸರಾದೆನೆ ನಿನಗೆ ಬಿಡು, ಕೈ-।
ಲಾಸಪತಿ ಶಂಕರನೆ! ಲಂಕಾ।
ಧೀಶನಿಗೆ ಮನಮೆಚ್ಚಿ ಕೊಟ್ಟೆಲೊ, ಪ್ರಾಣಲಿಂಗವನು॥
ಈ ಸಕಲ ಜೀವಿಗಳ ಮೃತ್ಯುವು।
ನಾಸವಾಗಿಹುದೆನುತ, ನಿನ್ನೊಳು।
ಘೋಷಿಸೀ ಮತ್ಪತಿಯನೆಂದೊರಲುವೆನು ವನಬಾಲೆ ॥ ೧೫ ॥

ದೂರುವದು ಸರಿಯಲ್ಲಲೈ! ಪದಿ।
ನಾರು ವರುಷದಿ ನಿನ್ನ ಸತಿಯಳ-।
ಪಾರ ಪೂಜೆಯ ಗೈದ ನಾನಿನಗನ್ಯಳಾಗುವೆನೆ?॥
ಘೋರ ವಿಪಿನದೊಳಾಣ್ಮನಸುವನು।
ಹೀರಿ, ದುಃಖಾಂಬುಧಿಯೊಳಗೆ ಕೈ।
ಮೀರಿ ಪೋಗುವದುಚಿತವಲ್ಲಲೊ, ಕರುಣೆ ಗೌರೀಶ - ॥ ೧೬ ॥

ಬಂದನೈ ಯಮಧರ್ಮ ಕಾಲನು.।
ಬಂದನೈ; ಪಾಶಾಂಕಿತನು ತಾ।
ಬಂದನೈ ಘನ ಮಹಿಷ ವಾಹನ ನೀಲತನು ಬಂದ॥

ಬಂದನೈ ಯಮ ಪುರವರಾಧಿಪ! ।
ಬಂದನೈ ವಿಕಟಸ್ವರೂಪನು! ।
ಬಂದನೈ ಯಂತಕನು ಮತ್ಪತಿಯಸುವಕೊಂಡೆಯ್ಯೆ!! ॥ ೧೮ ॥
ವ್ಯರ್ಥವಾಯಿತೆ? ಯಿನಿತು ದೇವರ ।
ಪ್ರಾರ್ಥನೆಯು, ವಕಟಕಟ ವಿಧಿ ಸಾ- ।
ಮರ್ಥ್ಯ ವೆಂತಹದಿಹುದೊ! ಮತ್ತಿನ್ನಾವ ದೇವರನು ॥
ಪ್ರಾರ್ಥಿಸಲಿ, ಪ್ರತ್ಯಕ್ಷ ಪತಿಪ್ರಾ- ।
ಣಾರ್ಥಿಯಾದಂತಕಗೆ, ಕರುಣಾ ।
ವೃತ್ತಿ ಪುಟ್ಟದೆ? ಪತಿಪರಾಯಣೆಗಾಗಿ ಸುಜನನೊಳು ॥ ೧೯ ॥
ಲಾಲಿಸೆಲೆ ಮುನಿಪುಂಗವನೆ ಮನು- ।
ಜಾಳಿಗತಿ ಭೀಕರ*ಸ್ವರೂಪನು ।
ಕಾಲನಾದೊಡೆ ಯಾಪತಿವ್ರತೆ ಜಿದರದಲಿ ಮನದಿ ॥
ತಾಳಿ ಧೈರ್ಯವನವಗೆ:— ಕರುಣಾ ।
ಶಾಲಿ ಪುರುಷೋತ್ತುಮನು ದಾರಿಹೆ ।
ಪೇಳು? ಯಮಲಕ್ಷಣದೊಳೊಪ್ಪುವೆ, ಮಂಕು ದೋರದಲೆ ॥ ೨೦ ॥
ಯಮ:— ಸತ್ಯವೆಲೆ ಕುಲಸತಿ-ಶಿರೋಮಣಿ ।
ಮರ್ತ್ಯರಸುವನು ಹೀರ್ವ ಯಮನೀ ।
ಸತ್ಯವಾನನು ಕಳೆದನಿಂದಾಯುಷ್ಯ ಪರಿಮಿತಿಯ ॥
ಮಿಥ್ಯವಲ್ಲೀನುಡಿಯು, ಬಿಡು ಪುರು- ।
ಷೋತ್ತುಮನನಭಿಲಾಷೆಯನು, ಚಿರ- ।
ಮುಕ್ತನಹನಿವಗಾಗಿ ಚಿಂತಿಸಬೇಡ ನೀನಿನ್ನು ॥ ೨೧ ॥
ಸಾವಿತ್ರಿ:— ನರರಸುವ ಶೆಳೆಯಲ್ಕೆ ತವಮೊ- ।
ತರುಗಳೈದುವರೆಂಬರಾದೊಡೆ, ।
ಬರಲು ಕಾರಣವೇನು ಮತ್ಪತಿಗಾಗಿ ನೀನಿಂದು ॥
ತರಳೆಯನು ಬಿಟ್ಟಡವಿಯಲಿ ಯೆ- ।
ನ್ನರಸನಸುವನು ಕೊಳ್ವ ಬಗೆಯದು, ।
ಸರಸ ಮಪ್ಪುದೆ? ಕರುಣಿ ಪೇಳವನೆ ತಿಳಿದುನೋಡಿದನು ॥ ೨೨ ॥

ಯಮ:— ಸತ್ಯವಾದಿಯಸಿವನ್ನೀಗೆ ಸ- |
ದ್ಭಕ್ತಿ ನೆಲೆಗೊಂಡಿಹುದು ಧರ್ಮಾ- |
ಸಕ್ತ, ಪರಮೋದಾರ ಸಿವನಾ ದೂತರೊಯ್ಯಲ್ಕೆ ||
ಶಕ್ತರಲ್ಲದರಿಂದ ಬರಲಿಂ- |
ತುಕ್ತ ವಾಯಿತು ಕೇಳು, ಜೀವ- |
ನ್ಮುಕ್ತನಹನಿವನೆನುತ ಕೊಂಡನು, ಪ್ರಾಣಪುರುಷನನು || ೬೩ ||
ಹರಣ ಪೋಗಲು ಸತ್ಯವಾನನ |
ಸಿರಿಮೊಗದ ಕಳೆಗುಂದಿ, ದೇಹವು |
ನಿರಸವಾದುದು ಸಿಡಿದ ಕಾಷ್ಟಾಕಾರದಂದದಲಿ ||
ತ್ವರಿತದಿಂ ಕೊಂಡವನ ಪ್ರಾಣವ |
ತೆರಳೆ ದಕ್ಷಿಣದೆಶೆಗೆ ಜವ, ಕಾ- |
ತರಿಸಿ ಹಲುಬಿದಳಾಗ ಬಹು ಪರಿಯಿಂದಲಬುಜಾಕ್ಷೀ || ೬೪ ||
ಕೊಂಡು ಪೋಗದಿರೆಲವೆಲವೊ! ಮಾ- |
ರ್ತಾಂಡ ನಂದನ!! ಸತಿಯಳೆದುರಿಗೆ |
ಗಂಡನಸುವನು ಕೊಳ್ವುದೆತ್ತಣಲೇಸು ಸುಜನರಿಗೆ? ||
ಬಂಡು ಮಾಡುವದನುಚಿತವು! ಯಮು |
ದಂಡ ವಿರ್ದೋಡಯೊಗ್ಯದಲಿ ಶಿರ |
ಖಂಡಿಪರೆ? ಪೋದೊಡನೆ ಬಿಡುವವಳಲ್ಲೆನುತ ಮನದಿ || ೬೫ ||
ಅರರೆ! ರವಿಚಂದ್ರಾದಿಗಳೆ! ಪರ- |
ತರದ ತಾರಾಂಗನೆಗಳೆಲೆ ಕೇ- |
ಸರಿಗಳೆಲೆ ವ್ಯಾಘ್ರಗಳೆ! ಮತ್ಪತಿ ತನುವ ನೀವಿಂದು ||
ಪೊರೆಯುವದು; ನಾಂ ಬರುವ ಪರಿಯಂ- |
ತರದಿ ವನಬಾಲೆಯಳ ಮೊರೆಯನು |
ಜರೆಯು ಬೇಡಿರಿ ನೀವೆನುತ ಬೆಂಬತ್ತಿದಳು ಯಮನ || ೬೬ ||

ಇತಿ ಶ್ರೀ ಕಪಿಕಿಂಕರ ತೊರವೆ ರಾಘವಾಂಕ ಕವಿ ವಿರಚಿತ

## ಸತಿ ಸಾವಿತ್ರಿ ಮಹಾತ್ಮೆಯೊಳ್ ನವಮೋಧ್ಯಾಯ

ಪದ ೬೪೪ ಕ್ಕೆ ಮಂಗಲಮಸ್ತು.

# -: ಅಥ ದಶಮೋಧ್ಯಾಯಃ :-

ಸಂ. ಸೂ. ಪ.|| ಬೆಂಬಿಡದೆ, ಧರ್ಮಜನನಾ ಶಶಿ- ।
ಬಿಂಬಮುಖಿ ಸರಸೋಕ್ತಿಯಿಂದಲಿ- |
ಡಂಬಡಿಸಿ, ಪತಿಯಸುಪ ಪಡೆದಳು ಮುನಿಪ ಕೇಳೆಂದ ||

ಕೂಡಿಬಹ ಕುಲಸತಿಯ ಮೊಗವನು ।
ನೋಡಿ ಕಳವಳಗೊಳುತಲಂತಕ— |
ಬೇಡ ಬರದಿರು ಪೋಗು, ಜೀವಿಸನಿನ್ನು ತವ ಪತಿಯು ||
ನೋಡು ಮರ್ತ್ಯಳು ನೀನು ನನ್ನೊಡ- |
ಗೂಡಿ ಬರಲಾಗುವದೆ? ಫಲಕೈ- |
ಗೂಡದಿರೆ, ಶ್ರಮಬಟ್ಟು ಸಾರ್ಥಕವೇನು? ನಿನಗಿನ್ನು || ೧ ||

ಸಾವಿತ್ರಿ:— ಗುರುಹಿರಿಯರಾಥಿತ್ಯದಿಂ, ಸ- |
ತ್ಪುರುಷರಾಶೀರ್ವಾದದಿಂದೀ |
ವರೆಗೆ ಮಾಡಿದ ಬ್ರಹ್ಮಚರ್ಯ ವೃತಾನುಭವದಿಂದ ||
ಕರುಣಿದೇವನೆ! ನಿನ್ನ ವದನಾಂ- |
ಬುರುಹವನು ಕಂಡಿರಲು, ಶಕ್ತಿಯು ।
ಪಿರಿದು ಕುಂಠಿತವಾಗಲರಿಯದು ಪತಿಸಮಾಗಮದಿ || ೨ ||

ಪತಿಯು ಮತ್ಪ್ರಾಣೇಶ ನೀನಾ ।
ಪತಿಯ ಪ್ರಾಣಕಧೀಶನಿರ್ದೊಡೆ |
ಹಿತವಪೇಕ್ಷಿಸುವಾಪ್ತ ನೀನಾದೆಂಬ ಸಥಿಯಿಂದ ||
ನುತಿಸಿ ಪೇಳುವೆನೊಂದು ನುಡಿಯನು, ।
ಸತಿಯ ನುಡಿಯೆಂದೆನುತ ಲಾದರ |
ಮತಿಯ ನಳಿಯಲು ಬೇಡೆನುತ ಕೈ ಜೋಡಿಸುವೆ ನಿನಗೆ || ೩ ||

ಧರಿಸರ್ರೈ ಸದ್ವ್ರತವ ಮೇಣಾ ।
ಪರಿಸರ್ರೈ ಸಜ್ಜನರ, ಪುಣ್ಯವ |
ನರಿಸರ್ರೈ ಸದ್ಧರ್ಮದೊಳು ತನು ಮನವನನವರತ ||
ನುರಿಸರ್ರೈ ತಪ ಯಾಗವನು ಪಥಿ- |
ಕರಿಸರ್ರೈ, ಶ್ರಮ ಕಾರ್ಯದೊಳು ಸಂ- ।
ಚರಿಸರ್ರೈ ಮನವಿಡುತಲಾತ್ಮಜ್ಞಾನ ವಿರಹಿತರು || ೪ ||

ಧರ್ಮ ಮೂರುತಿ ಕೇಳು, ಪರಮೋ- ।
ಧರ್ಮವಾತ್ಮಜ್ಞಾನ ಪಡೆವುದೆ, ।
ಧರ್ಮವಿಹುದದು ನರ-ಸುರೋರುಗ ಸಕಲ ಜೀವರಿಗೆ ॥
ಧರ್ಮಮಾರ್ಗವೆ ಮುಕ್ತಿಪಥ, ಸ- ।
ದ್ಧರ್ಮ ದುಷ್ಕರ್ಮಾರಿ, ಯಿರಲವ- ।
ಧರ್ಮವನ್ನಾಚರಿಸಲೆಂತೆಜೊ? ರಮಣನನ್ನುಳಿದು ॥ ೫ ॥
ಯಮ:— ಮಾನವಿಯು ನೀನಲ್ಲವಿದಕಸು- ।
ಮಾನವೇತಕೆ, *ತ್ರಿಭುವನಕೆ ಸ- ।
ನ್ಮಾನಿತದ ತವ ನುಡಿಗೆ ಮೆಚ್ಚಿದೆ, ಪತಿಯಸುವ ನುಳಿದು ॥
ಏನು ಬೇಡುವೆ ಬೇಡು; ಮನದನು- ।
ಮಾನವಿಲ್ಲದೆ ಕೊಡುವೆ, ಸೆಲೆ ಕಮ- ।
ಲಾನನೆಯೆ ಶ್ರಮಗೊಳ್ಳಬೇಡೆನ್ನಯ ಸಮಾಗಮದಿ ॥ ೬ ॥
ಸಾವಿತ್ರಿ:— ದೇವ, ಚಿತ್ತೈಸೀಗಲೆನ್ನಯ ।
ಮಾವ ರಾಜ್ಯಭ್ರಷ್ಟನಾಗಿಹ ।
ಠಾವುಗಾಣದೆ ಕುರುಡನಾಗಿರ್ಪನು ವನಾಂತರದಿ ॥
ಈವುದವಗಾನನ ಸುಕಾಂತಿಯ ।
ನಾವಕಾಲದಿ ಕುಂದದಂತೆನ- ।
ಗೀ ವರದೊಳಿದನೊಂದೆನಲು, ಯಮಧರ್ಮನಿಂತೆಂದ ॥ ೭ ॥
ಯಮ:— ವರ ಪತಿವ್ರತೆ ಕೊಟ್ಟೆ ನಾನೀ- ।
ವರವ, ಪತಿದೇಹವನು ವಿಪಿನಾಂ- ।
ತರದಿ ಬಿಟ್ಟಿರುವದು ಸಮುಚಿತಮಲ್ಲ. ಕೊಂಡದನು ॥
ತೆರಳು ನಿಜಮಂದಿರಕೆ, ಮನದೊಳು ।
ಬರಿದೆ ಚಿಂತಿಸಬೇಡ, ಭವನಕೆ ।
ಮರಳು ಮರಳೆಂದೆನಲವಗೆ ನುಡಿದಳ್, ಸರೋಜಮುಖಿ— ॥ ೮ ॥
ಸಾವಿತ್ರಿ:— ಭವನವಾವುದು ಸತಿಗೆ? ಪತಿ ಸ- ।
ದ್ಭವನವಲ್ಲದೆ ಬೇರೆ, ಭಾವಿಸ- ।
ಲವರು ಮತ್ತಾರೆನ್ನ ಸದ್ಗತಿಗಧಿಕ ಕಾರಣರು ॥

ಜವನೆ ಪತಿಯೊಡನಿರುವೆನೆಂದೊಡೆ ।
ಭವಣಿ ಲೇಸೆನಗೆನಿಸದಾದೊಡೆ ।
ಯುವಧರಿಪುದೆನ್ನೀ ನುಡಿಯನಾದರದಿ ಮನಗೊಟ್ಟು ॥ ೯ ॥
ನರಸಿಖಾಮಣಿ ಸುಜನರಾ ಸ- ।
ತ್ಪುರುಷರನ್ನಾಶ್ರಯಿಸಿ, ತನು ಮನ- ।
ಸಿರಿಯ ನರ್ಪಿಸುತವರ ಸೇವೆಯೊಳಿರ್ಪರನುದಿನದಿ ॥
ಬರಿದೆ ಪೋಗದು, ಸತ್ಪುರುಷರನು- ।
ಚರವು ಶೃತಿಸಿದ್ಧಾಂತವಿದು ಯಮ- ।
ಪುರವರನೆ ನಿನ್ನಾಶ್ರಯಿಸಿದೆನಗಾವ ಭಯವಿಹುದು ॥ ೧೦ ॥
ಯಮ:— ಎನ್ನಮನ ಮೆಚ್ಚುವ ತೆರದಿ, ಸಂ- ।
ಪನ್ನಮತಿ ಪೇಳ್ದ ಸಮವಾಕ್ಯವ- ।
ನುನ್ನತಾನಂದವನು ಪುಟ್ಟಿಸಿದೀಗ ಮನ್ಮನದಿ ॥
ಸನ್ನುತಳೆ ಮೆಚ್ಚಿಹೆನು ನಾ, ಮನ- ।
ದನ್ನನಸುವನು ಬಿಟ್ಟು, ಕಳೆಯಾ- ।
ಪನ್ನವನು ಬೇರೊಂದು ವರವನು ಕೊಡುವೆನದರಿಂದ ॥ ೧೧ ॥
ಸಾವಿತ್ರಿ:— ತರಣಿಸುತಕೇಳ್ ಶತೃವಶವಾ- ।
ಗಿರುವ ಮಾವನ ರಾಜ್ಯ ವೈಭವ ।
ಮರಳಿ ಬಂದನು ದಿನದಿ ಧಾರ್ಮಿಕನೆನಿಸಿ ಬಾಳ್ವಂತೆ ॥
ಕರುಣಿಸುವದೀ ವರದಿ, ವಿಪಿನದೊ- ।
ಳಿರುವವನ ದುಃಖಾನುಭವವೀ ।
ಧರೆಯೊಳಾರಿಗೆ ಬರಲಿಬೇಡವಸಂಥ ಸುಜನರಿಗೆ ॥ ೧೨ ॥
ಯಮ:— ಒಳಿತು ಕೊಟ್ಟೆನು, ಶತೃವಶವಾ- ।
ದಿಳೆಯು ಬಹದಿನ್ನಲ್ಪ ಕಾಲದಿ ।
ಕಳೆಯುವನು ವನವಾಸವನು ಸದ್ಧರ್ಮ ನಿಯಮಗಳ ॥
ಉಳಿಯದಲೆ, ಬಹುಕಾಲ ವಸುಧಾ ।
ತಳದಿ ಬಾಳುವನವನು, ನಡೆ ಶ್ರಮ- ।
ಗಳಿಸಬೇಡೆನ್ನೊಡನೆ ಚರಿಸುತ, ಪೋಗು ನಿಜಗೃಹಕೆ ॥ ೧೩ ॥

ಸಾವಿತ್ರಿ:— ಮರೆಯರಾತ್ಮಜ್ಞಾನಿಗಳು ಯಮ– |
ಪುರನಿವಾಸಿಯು ಪಾಶಕಂಕಿತ– |
ರಿರುವೆವೆಂಬುದನಾವಗಂ, ಜಡದೇಹ ನಿಜವೆಂದು ||
ಮೆರೆಯರೈ ಮನಕಾಯ ವಚನದಿ |
ಪರರಿಗುಪಕಾರವನು ಗೈಯ್ಯುತ |
ಲಿರುವರೈ, ಭಾಗ್ಯೋದಯದೊಳುನ್ಮತ್ತರೆನಿಸದಲೆ || ೧೪ ||
ಸರಸವಮೂಹವೆ ನಿರುತ ಸೌಖ್ಯದೊ- |
ಳಿರವುದನು ನಾ ಕಾಣೆ, ಧಾತ್ರಿಯೊ- |
ಳರಸಿದೊಡೆ, ದುಃಖಿಗಳು ಬಹುಜನರಿರ್ಪರಾದಡೆಯು ||
ಪುರುಷ ಪುಂಗವರೆನಿಸುತಿಹ ಸ– |
ತ್ಪುರುಷರಂತಶುದ್ಧಿಯಿಂ ಶರ- |
ಣೆರಗಿದವರಸು ಪೊರೆದು ಜಗದಾಧಾರರೆನಿಸುವರು || ೧೫ ||

ಯಮ:— ಹಸಿದ ಮನುಜನಿಗಿಷ್ಟಭೋಜನ |
ವೆಸಗಿದಂತೀಗೆನ್ನೊಳುಪದೇ– |
ಶಿಶಿ ಮಧುರವಾಕ್ಸುಧೆಯ ನೀಡಿದ ನಿನ್ನ ಋಣಕಾಗಿ ||
ಉಸಿರು ಮನದಾಕಾಂಕ್ಷೆಯನು ಪೂ– |
ರಿಸುವೆ ನೀ ಮೂರನೆಯ ವರದಿಂ– |
ದಸಮ ತತ್ವಜ್ಞಾನಿ, ಪಾಸಟಿಯಾರು ನಿನಗಿನ್ನು || ೧೬ ||

ಸಾವಿತ್ರಿ:— ದಂಡಧರ ಕೇಳೆನ್ನ ಪಿತನು- |
ದ್ದಂಡ ಭೂಮಿಪನಿರ್ಪನಾ ನೃಪ |
ಚಂಡಕುಲದೋದ್ಧಾರ ಗೈಯ್ಯುವ ತನುಜ ಹೀನತೆಗೆ ||
“ ಖಂಡಿಸಲು ಮತ್ಕುಲವ ಸೃಜಿಸಿದ |
ಪುಂಡರೀಕೋದ್ಭವನು, ಮತ್ಕುಲ |
ದಂಡಧರ ನಾನಾದೆ ” ನೆನ್ನುತ ಚಿಂತಿಸುವನವಗೆ || ೧೭ ||
ಕರುಣಿಸೌರಸ ನೂರು ಜನ ಸುಂ- |
ದರ ಕುಮಾರರ, ಧರ್ಮನಿಯಮದಿ |
ಚರಿಸಿ, ಸಜ್ಜನರೆನಿಸಿ, ವಂಶೋದ್ಧಾರವನು ಗೈದು ||

ನಿರುತ ತನ್ನಯ ಪ್ರಜರ, ಮಕ್ಕಳ |
ತೆರದಿ ನೋಡುತಲನುದಿನದೊಳೀ |
ಧರೆಯ ಪೊರೆಯಲಿ, ನಿನ್ನ ಪೆಸರನು ಪರಿಸಿ ಪಾಡುತಲಿ ‖ ೧೮ ‖
ಯಮಃ— ಚಿಂತಿಸಲು ಬೇಡಿನ್ನು ತಪ್ಪೂ– |
ಕಾಂತ, ರವಿಯ ಸಮಾನ ತೇಜದ |
ಕಾಂತಿಯುತ ಶತಸುತರ ಪಡೆಯುತ ಪಾಲಿಪನು ಧರೆಯ ‖
ಅಂತರಿಸದೀನುಡಿಯು, ನಡೆ ವಿಪಿ- |
ನಾಂತರದ ಕುಪಥದೊಳು ನೀನ– |
ತ್ಯಂತ *ಶ್ರಮಗೊಂಡಿರುವೆ ಪತಿಯೊಡನೈದು ಬಹುದೂರ ‖ ೧೯ ‖
ಸಾವಿತ್ರಿಃ— ದಿನಕರಾತ್ಮಜ! ಸಕಲ ಜೀವಿಗ– |
ಳನು ಸಮದೊಳೀಕ್ಷಿಸುತ, ಧರ್ಮಜ |
ನೆನಿಸಿರುವೆ ನೀ ನೀಚತುರ್ದಶ ಲೋಕದೊಳು, ಬಗೆಯೆ ‖
ಸನುಮತಿಯು ನೀನೆಂದು ಭಾವಿಸಿ, |
ವಿನಯದಿಂ ಬೇಡೊಂದು ವಚನವ |
ನೆನಿಸಿ, ನುಡವೆನುಲಾಲಿಸೆಂದಾದರದಿ ಬಿನ್ನೈಪೆ ‖ ೨೦ ‖
ಶರಣೆರಗಿ ಸೇವಿಸುತಿರಲು, ಸ- |
ತ್ಪುರುಷರೀಕ್ಷಿಸಿ. ಯಧಿಕ ಪ್ರೀತಿಯ |
ನಿರಿಸುತೆಮ್ಮನು ಕರುಣಿಸುವರೆಂದಖಿಲ ಸನ್ಮನರು ‖
ಶರಣು ಪೋಗುವರವರಿಗಾ ಸ- |
ತ್ಪುರುಷರಂತಃಶುದ್ಧಿಯಿಂ, ಮನ– |
ದಿರುವನೀಕ್ಷಿಸಿ, *ಪ್ರತಿಫಲವನಾಸಿಸದೆ ಕರುಣಿಪರು ‖ ೨೧ ‖
ಯಮಃ— ಮಂಗಳೆಯೆ! ಮನಕಲ್ಮಿಷಾಂಧ ಸ– |
ತಂಗ ಸಮವಹ ನುಡಿಯ ಪೇಳ್ದ- |
ತ್ತುಂಗ ನೋಡವನಿತ್ತೆ, ನಿನ್ನೀ ಪತಿಯಸುವ ನುಳಿದು ‖
ವ್ಯಂಗವೇನಿಹುದುಸಿರಿ ಪಡೆ ಸ- |
ನ್ಮಂಗಲವನನುದಿನದೊಳಬಲಾ |
ಪುಂಗವಳು ನೀನಪ್ಪೆ ಬಿಡು ದುಃಖಾತಿರೇಕವನು ‖ ೨೨ ‖

ಸಾವಿತ್ರಿ:— ರವಿತನೂಜನೆ, ಲಾಲಿಸಿ ಮ- ।
ದ್ಧವಗೆ ಯೌರಸರೆನಿಪ ಶತ ತನು- ।
ಭವರ ಕೊಟ್ಟೀ ಶಾಲವಂಶನೃಪಾಲರಂಶವದು ॥
ಭುವನದೊಳಗನವರತ ವರನೃಪ ।
ನಿವಹಮಣಿಗಣವಾಗುವಂದದೊ- ।
ಳವನಿಯಲಿ, ವರಗೊಟ್ಟು ಪಾಲಿಪುದಾವಗಂ ಬಿಡದೆ ॥ ೨೩ ॥

ಯಮ:— ನಾರಿಕುಲ ಸಂಪನ್ನೆ ವಂಶೋ- ।
ದ್ಧಾರ ಗೈಯುವ ಸುಗುಣ ಶತ ಸುಕು- ।
ಮಾರರಾಗುವರಿದಕೆ ಸಂಶಯವಿಲ್ಲ, ಹಳುವದಲಿ ॥
ದೂರ ಬಂದಿಹೆ, ಮರಳಿ ಪೋಗಾ ।
ಗಾರಕಿನ್ನುಭಯಾನ್ವಯಗಳು- ।
ದ್ಧಾರಮಪ್ಪದುನಿಶ್ಚಯನ್ನು, ನಡೆ ತಪ್ಪದೀ ನುಡಿಯು ॥ ೨೪ ॥

ಸಾವಿತ್ರಿ:— ವ್ಯರ್ಥವಾಗದು ಸತ್ಪುರುಷರಾ- ।
ಥಿತ್ಯ, ಸಹವಾಸಿಗಳ ಮನದಿ- ।
ಷ್ಟಾರ್ಥವನು ಪೂರೈಸಿ, ಜಗದಾರಾಧ್ಯರೆಂದೆನಿಸಿ ॥
ಪೃಥ್ವಿಯನ್ನುದ್ಧರಿಸಿ, ಜನರ ಕೃ- ।
ತಾರ್ಥಿಗಳ ಮಾಡುವದೆ, ನಿಜ ಪುರು- ।
ಷಾರ್ಥವಾಗಿಹುದುಸಿರಲಳವಿಲ್ಲವರ ಮಹಿಮೆಯನು ॥ ೨೫ ॥

ಕರಗುವದು ತನಗೊದಗಲಾ ಶಿಖಿ ।
ಕಿರಣಗಳು ದವನೀತವತಿ ಮೃದು ।
ತರವೆನಿಸುತಿಹುದಾದೊಡಾ ಸಜ್ಜನರ ಹೃದಯವದು ॥
ಪರರಿಗೊದಗಿದ ಕಷ್ಟದಿಂ ಕಡು ।
ಕರಗಿ ಕರುಣಾ ರಸದಿ ಪುಳುಕಿತ ।
ವಿರುವದೆಂದೊಡೆ, ಸಾಮ್ಯ ವಿನ್ನೇನಿರವೃದವರಿಂಗೆ ॥ ೨೬ ॥

ಯಮ:— ಸರಸ ತತ್ವಜ್ಞಾನಿ ರಸಸಂ- ।
ಭರಿತ ವಾಕ್ಸುಧೆ ಸವಿಯೊಳಗೆ ವೈ ।
ವರೆಸು ಲಾಲಿಸುತ್ತೈದಿದೆಸು ಬಹು ಮಾರ್ಗವನು ಚರಿಸಿ ॥

ವರವ ಪಾಲಿಪೆನೈದನೆಯ, ಭೂ- ।
ವರ ಕುಮಾರಿಯೆ ಕೊಂಡದನು ಮಂ- ।
ದಿರಕೆ ನಡೆ, ಸನ್ಮಂಗಲವು ನಿನಗಾಗಲನವರತ ॥ ೨೭ ॥

ಸಾವಿತ್ರಿ:— ದೇವ! ಮತ್ತೇನಖಿಲ ಲೋಕಕ- ।
ಭಾವವಾದಪವರ್ಗವನು ಸ- ।
ದ್ಭಾವವನು ಬಿಟ್ಟೆನಗೆ ಬೇಡಿನ್ನಾವ ಸೌಭಾಗ್ಯ ॥
ಪಾವನಾತ್ಮನೆ, ಕೊಂಡ ಮತ್ಪತಿ- ।
ಜೀವವನು ಕೊಟ್ಟೆನಗೆ ಮುಕ್ತಿಯ ।
ಠಾವುಗಾಣಿಸಿ, ನಿರುತ ಪಾಲಿಪುದೆಂದು ಬಿನ್ನೈಪೆ ॥ ೨೮ ॥

ಆವ ಸಿರಿಯಿರ್ದೇನು? ಭಾವಿಸ- ।
ಲಾವ ಸುಖವಿರ್ದೇನು? ತಿಳಿಯ- ।
ಲ್ಯಾವ ಭೋಗದ್ರವ್ಯಗಳು ಬರಲೇನು ಫಲವಿಹುದು ॥
ಕೋವಿದಳು ತಾನಿರ್ದು ಸಾರ್ಥಕ ।
ವಾವುದಾ ಕುಲಸತಿಗೆ? ಪತಿ ಸಂ- ।
ಭಾವನೆಯ ಪಾಸಟಿಯೆ? ಪಾಲಿಸು ಪತಿಯ *ಪ್ರಾಣವನು ॥ ೨೯ ॥

ಯಮ:— ಪರಮ ತತ್ವಜ್ಞಾನಿ! ವರ ವಾ- ।
ಕ್ಸರಣಿಯಲಿ ಪರಮಾರ್ಥವನು ವಿ- ।
ಸ್ತರಿಸಿ ಮೆಚ್ಚಿಸಿದೀಗ ಬಿಟ್ಟೆಹೆನಿನ್ನು ತವ ಪತಿಯ ॥
ಹರಣವನು, ಪೋಗಿನ್ನು ಧರ್ಮಾ- ।
ಚರಣೆಯಲಿ ನಿನ್ನೊಡನೆ ವಸುಧಾ ।
ತರುಣಿಯನು ನೆರೆ ಪಾಲಿಪನು ನಾನೂರು ವರುಷಗಳ ॥ ೩೦ ॥

ಇತಿ ಶ್ರೀ ಕವಿಕಿಂಕರ ತೊರವೆ ರಾಘವಾಂಕ ಕವಿ ವಿರಚಿತ

**ಸತಿ ಸಾವಿತ್ರಿ ಮಹಾತ್ಮೆಯೊಳ್ ದಶಮೋಽಧ್ಯಾಯ**

ಪದ ೨೭೪ ಕ್ಕೆ ಮಂಗಲಮಸ್ತು.

10

# -: ಅಥ ಏಕಾದಶೋಧ್ಯಾಯ :-

ಸಂ. ಸೂ. ಪ.॥ ಪಡೆದು ಸೌಭಾಗ್ಯವನು ನಿಜ ಪತಿ- ।
ಯೊಡನೆ ಬರೆ ಸಾವಿತ್ರಿ, ನಯನವ ।
ಪಡೆದ ನೃಪ, ಸುತ ಸತ್ಯವಾನನಿಗಿಟ್ಟ ಮಕುಟವನು ॥
ಕೇಳು ಕಂಜಜಸಂಭವನೆ ಭೂ- ।
ಪಾಲ ಕುವರಿಯು, ಮನದಿ ತೋಷವ ।
ತಾಳಿ ಪೊರಮಟ್ಟಳು ನಿಜಾಣ್ಮನ ದೇಹವಿದ್ದೆಡಿಗೆ ॥
ಕಾಳುಪಥದಿಂ ಚರಿಸಿ ಬಂದು, ವಿ- ।
ಶಾಲದಾ ವಟವೃಕ್ಷ ಮೂಲದೊ- ।
ಳೋಲವಿಸಿ, ನಿಶ್ಚೇಷ್ಟ ಪತಿಯನು ಕೊಂಡಳೂರಿನಲಿ ॥ ೧ ॥
ಕಳಿಯೆ ಕೆಲನಿಮಿಷಗಳು, ನಿದ್ರೆಯ ।
ನುಳಿದು ಜಾಗ್ರುತನಾಗುವಂದದಿ ।
ಘಳಿಲನೇಳುತ ತಿಕ್ಕಿ ನಿಜಪಕ್ಷ್ಮಂಗಳನು ಸತಿಗೆ ॥
ಲಲನೆ ಕೇಳೀ ತೆರದ ನಿದ್ರಾ- ।
ವಲಯವೆಂತೆನಗಿದುದೆನಗೆ ತಳ ।
ವಳದ ಸ್ವಪ್ನ ಚಮತ್ಕೃತಿಯ ನಾ ಕಂಡೆನಿಂದಿನೊಳು ॥ ೨ ॥
ನೋಡುತಿರೆ ನೀಲಾಂಗ ಮಹಿಷಾ- ।
ರೂಢನೊಬ್ಬನು ಬಂದು ತನ್ನೊಡ- ।
ಗೂಡಿ ಕೊಂಡೊಯ್ಯಲ್ಕೆ ಯೆನ್ನನು ಬಿಡದೆ ನೀನವನ ॥
ಪಾಡಿ ಬೇಡುತ ರಸಭರಿತ ವಾ- ।
ತಾಡಿ ಮನಮೆಚ್ಚಿಸಲವನು ವರ- ।
ನೀಡಿದಂತೆನಗಾದುದೀ ಸ್ವಪ್ನಾರ್ಥವೇನಿಹುದು? ॥ ೩ ॥
ಪ್ರಾಣನಾಥನ ವಚನ ಕೇಳ್ದಾ ।
ಮಾನಿನಿಯು, ಯಮಧರ್ಮನಂ ಸುಂ- ।
ಮ್ಮಾನಗೊಳಿಸುತ ಪತಿಯ ನುಳುಹಿದ ಕಥೆಯ ವಿಸ್ತರವ ॥
ಮಾಣದುಸಿರುತಿರಲ್ಕೆ ಗಗನದಿ ।
ಭಾನುಮಣಿಯಡಗಿದೊಡೆ ಸಂಧ್ಯಾ ।
ಮಾನಿನಿಯು ಮೊಗವೆತ್ತಿ ಮುಂಬರಿದಳು ಧರಿತ್ರಿಯಲಿ ॥ ೪ ॥

ವಾರಿಜೋದ್ಭವಸುತನೆ! ಪರ್ಣಾ- |
ಗಾರದೊಳಗಿರ್ದಾ ದ್ಯುಮತ್ಸ ನ- |
ಪಾರ ಚಿಂತೆಯನಾಂತು, ಸುತವಾತ್ಸಲ್ಯದಿಂ ಬಳಲಿ— ||
ಆರುಗತಿ ಯಂಧಕರಿಗೆಯು ಕೈ- |
ಮೀರಿ ಪೋದವನು ತನುಜ! ನಿಂದೀ |
ಘೋರ ವಿಪಿನಾಂತರದೊಳಕಟಕಟಿಸುತ ಬಿಸುಸುಯ್ದು— || ೫ ||
ಕ್ರೂರ ಪಶುಬಾಧಿಸಿತೊ? ಕೊಡಲಿಯು |
ಜಾರಿ ವ್ಯಥೆಪಡಿಸಿದುದೊ? ಮೇಣಾ |
ನಾರಿಮಣಿ ಸಾವಿತ್ರಿ ವ್ರತದುಪುವಾಸದಿಂ ಬಳಲಿ ||
ಬಾರದಾದಳೊ ಗೃಹಕೆ? ವಿಪಿನದೊ- |
ಳಾರಿಗೊರಲುವೆನೆನಲು, ದೃಷ್ಟಿಯು |
ತೋರಲಾರಂಭಿಸಿತು, ವೈವಸ್ವತನ ವರದಿಂದ || ೬ ||
ಪೇಳಲಿನ್ನೇನಾಗಲಾ ಭೂ- |
ಪಾಲ ಕಣ್ಗಾಣಿಸಲು "ಮಗನಿ- |
ಲ್ಲಾಲಯದೊಳೆಂ" ದಮಿತ ದುಃಖಾರ್ಣವದಿ ಮುಳಿಗೆದ್ದು ||
ಕೇಳುತಲ್ಲಿರ್ದಖಿಲ ತಾಪಸ |
ಜಾಲವನು, ಹದನೇನು? ಮುಪ್ಪಿನ |
ಕಾಲದೊಳು ಸುತನಳಲು ಸಂಭವಿಸಿದುದೆ! ಯೆನಗಿಂದು || ೭ ||
ಅರಸನಾಡಿದ ನುಡಿಗೆ ತಾಪಸ |
ವರರು— ದುಷ್ಕಲ್ಪನೆಯ ಮನದಲಿ |
ತರದಿರಲೆ ಭೂಪಾಲ, ಪೋದೇಕ್ಷಣಗಳ್ಳೈದಿದೊಡೆ ||
ಪರಮ ಶುಭ ಶಕುನವಿದು ತಿಳಿ, ಕಾ- |
ತರಿಸ ಬೇಡಿನ್ನಲ್ಪ ಕಾಲದಿ, |
ಬರುವನಾಸುಕುಮಾರ ಸತಿಯೊಡಗೂಡಿ ಕ್ಷೇಮದೊಳು || ೮ ||
ತಾಪಸರ ನುಡಿಗೇಳ್ದು ಮನ ಸಂ- |
ತಾಪ ಶಮನದಿ ಕುಳಿತಿರಲು ಬಳಿ- |
ಕಾಪರಮ ಪತಿವ್ರತೆಯು ನೊಡಗೊಂಡೈದಿ ಚಿತ್ರಾಶ್ವ ||

ಸೋಪಹಾಸದಿ ಮುನಿಗಣದ ಕಮ- ।
ಲೋಪಮಿತ ಪದಕೆರಗಿ, ಭಕುತಿಯೊ- ।
ಳಾ ಪಿತಗೆ ಜನನಿಯಳಿಗಭಿವಂದಿಸಿದೊಡಾಕ್ಷಣದಿ ॥ ೯ ॥
ಕಂದ ಬಂದ್ಯಲೈ ಮತ್ಕುಲಾಂಬುಧಿ ।
ಚಂದ್ರ ಬಂದ್ಯಲೈ, ಸುಜನಮನದಾ ।
ನಂದ ಬಂದ್ಯಲೈ ಚನ್ನ ಸದ್ಗುಣ ವೃಂದ ಬಂದೆಯಲಾ ॥
ಮುಂದುಗಾಣದಲೀವರೆಗೆ ಬಹು ।
ನೊಂದೆ ನಾನಿಷ್ಟವಧಿ ವನದೊಳು ।
ನಿಂದುದೇಕೆಂದಪ್ಪಿ ಬೆಸಗೊಂಡನು ಮಹೀಪಾಲ ॥ ೧೦ ॥
ತಂದೆಯಾಡಿದ ನುಡಿಗೆ ಪರಮಾ- ।
ನಂದ ಬೀರುತ— ತಾತಕೇಳ್ ನಾ- ।
ನಿಂದು ಪತಿ*ವ್ರತೆಯಾದ ಮತ್ಕುಲಸತಿ ಪ್ರಭಾವದೊಳು ॥
ಬಂದೆನೀಗೃಹಕೆನುತ ವಿಸ್ತರ- ।
ದಿಂದ ಪೇಳುತಲಿರೆ, ಜನಾಳಿಯು ।
ಬಂದು ವಂದಿಸುತಾ ದ್ಯುಮತ್ಸನಿಗುಸಿರಿದರು ನಯದಿ— ॥ ೧೧ ॥
ಜನಪ ನಡೆ ಸಿಂಹಾಸನಕೆ, ದು- ।
ರ್ಜನ ಕುಬುದ್ಧಿಯ ಶತೃ ಸಮರಾಂ- ।
ಗಣದಿ ಹತನಾಗಿರ್ಪ ನಿನ್ನಯ ಮಂತ್ರಿ ತಂತ್ರದೊಳು ॥
ಕುಣಿಯುತಿಹಳಾನಂದದಿಂ ಭೂ- ।
ವನಿತೆ ವಿಜಯೋತ್ಸವಕೆ, ನಿನ್ನೊಡೆ ।
ತನವ ಹಾರೈಸುವಳು ಪಾಣಿಗ್ರಹಿಸು ನೀನವಳ ॥ ೧೨ ॥
ಎಂದ ನಿಜ ಪುರಜನರ ನುಡಿಗಾ- ।
ನಂದದಿಂ ಬರಲೊಪ್ಪಿ ಪರಿಜನ- ।
ವೃಂದದಾಮಾಂಗಲ್ಯ ಜಯಭೇರಿಯ ಮಹಾಧ್ವನಿಯ ॥
ದಂದುಗದಿ, ವಂದಿಗಳ ಜಯರವ ।
ದಿಂದ ಲಮರಾವತಿಯ ವೈಭವ ।
ದಿಂದ ಮಿಗಿಲೆಂದೆನಿಪ ಪುರಕೈದಿದರು ಶಡಗರದಿ ॥ ೧೩ ॥

ರಾಯ ಬಂದನು, ಭೂಲತಾಂಗಿಯ ।
ಪ್ರೀಯ ಬಂದನು, ಸಕಲ ಸುಗುಣನಿ- ।
ಕಾಯ ಬಂದನು, *ತ್ರಿಭುವನಕೆ ಸನ್ಮಾನಿ ತಾ ಬಂದ ॥
ಜೀಯ ಬಂದನು, ನಿಜಪುರಕೆ ನಿ- ।
ರ್ಮಾಯ ಬಂದನು, ನಮ್ಮ ಸರ್ವಾ- ।
ದಾಯ ಬಂದನು, ಕಾಯಜೋಪಮ ಪುತ್ರನೊಡಗೂಡಿ ॥ ೧೪ ॥
ದೇವ ಬಂದನು, *ಪ್ರಜರ ಪಕ್ಷದಿ ।
ಕಾವ ಬಂದನು, ವರ ಮುನೀಂದ್ರರ ।
ಜೀವ ಬಂದನು, ಕಾಮಿತಾರ್ಥವ ನೀವ ಪ್ರಭು ಬಂದ ॥
ತೀವಿದಂತಃಕರುಣದಾ ಸ- ।
ದ್ಭಾವಿ ಬಂದನು, ನಿಜ ಪುರಕೆ ನಮ- ।
ಗಾವಕೊರತೆಯ ದೇನೆನುತಲುಬ್ಬಿದ್ದುದಖಿಲ ಜನ ॥ ೧೫ ॥
ವರ ಮುನೀಶ್ವರ ಕೇಳು, ಮಹದೋ- ।
ತ್ಕರುಷದಿಂದಾ ದಿನವು ಕಳೆಯುತ- ।
ಲಿರಲು, ಮರುದಿನ ಮದ್ರದೇಶಾಧಿಪನ ಪಟ್ಟಣಕೆ ॥
ತೆರಳಿಬಾರೆಂದೆನುತ ಸಚಿವೇ- ।
ಶ್ವರನ ಹಸ್ತದೊ "ಳಿಂದು ನಿಮ್ಮಯ ।
ಬರುವ ಬಯಸುವೆ"ನೆಂಬ ಪತ್ರವ ಕೊಟ್ಟು ಬೀಳ್ಕೊಟ್ಟ ॥ ೧೬ ॥
ಕರಿ ತುರಗ ರಥ ದಳ ಸಹಿತ ಮುಂ- ।
ಬರಿದನಾ ಸಚಿವಾಗ್ರ ಮದ್ರೇ- ।
ಶ್ವರನ ಪುರ-ಪಥವಿಡಿದು, ಧಾವಿಸಿ ಬಂದವನ ಪದಕೆ ॥
ಸಿರವನೀಡುತ ಶಾಲ ಭೂಪತಿ ।
ಬರೆದ ಪತ್ರವ ನಿತ್ತು, ವುಚಿತಾಂ- ।
ತಗದ ಸೌಖ್ಯಾಸನದಿ ವಿಶ್ರಮಿಸಿದನು ನಗೆಮೊಗದಿ ॥ ೧೭ ॥
ಓಲೆಯೋದುತ ಪರಮ ಹರುಷವ ।
ತಾಳಿ ಚತುರಂಗಿಣಿಯ ಬಲ ಸ- ।
ಮ್ಮೇಳದಿಂ ನಿಜ ಸತಿಯೊಡನೆ ಪೊರಮಟ್ಟು ಮದ್ರೇಶ ॥

ಶಾಲದೇಶವನಾಂತು, ಪರಿಜನ ।
ಜಾಲದಿಂ ಭೂಪಾಲನೋಲಗ ।
ಶಾಲೆಯಲಿ ಬರಲೆದ್ದು ಬಿಗಿದಪ್ಪಿದನು ಶಾಲೇಶ ॥ ೧೮ ॥
ತಾಪಸರ ವರಬ್ರಹ್ಮತೇಜ ಕ- ।
ಲಾಪದಿಂ, ಮಕುಟಾಂಕಿತರ ಮಣಿ- ।
ದೀಪ್ತಿಯಿಂ, ಪಟುಭಟರ ಮಧ್ಯದೊಳಿರ್ಪ ಮಣಿಮಯದ ॥
ಚಾಪದರುಣಪ್ರಭೆಯೊಳಗೆ ವಿವಿ- ।
ಧೋಪಮಿತ ಶೋಭಾತಿಶಯದಿಂ ।
ಭೂಪನೊಡ್ಡೋಲಗವೆಸೆದುದೇವೇಳ್ವೆ ನಾನಂದು ॥ ೧೯ ॥
ಬಳಿಕ ವೇದೋಕ್ತಪ್ರಕಾರದೊ- ।
ಳಿಳೆಲತಾಂಗಿಯ ನೊಪ್ಪಿಸುತ ಭೂ- ।
ತಳದ ಸಪ್ತಸಮುದ್ರ ಜಲಪೂರಿತ ಸುಚಿನ್ಮಯದ ॥
ಕಲಶದಿಂ ನಿಜರಾಜ್ಯಪಟ್ಟವ- ।
ನೊಲೆದು ಸುತನಿಂಗಿತ್ತು ಶಿರದೊಳು ।
ಪೊಳೆವ ಮಣಿಮಯ ಮಕುಟವಿಟ್ಟನು ಮುದದಿ ಭೂಪಾಲ ॥ ೨೦ ॥
ಭೂರಿನಾದದಿ ಮೊಳಗಿದವು ಜಯ- ।
ಭೇರಿ ಕಾಳಿ ನಗಾರಿ ಪರವಾ ।
ಕಾರದೀ ವೃತ್ತಾಂತವನು *ತ್ರಿಭುವನಕೆ ತಿಳುಹಿಸಲು ॥
ಸಾರಿದರು ವಂದಿಗಳು ಮಿಗೆ ನರ- ।
ವೀರ ಶಾಲೇಶಂಗೆ ಜಯ ಜಯ ।
ಕಾರವೆಂದುಚ್ಚಸ್ವರದಿ ಬ್ರಹ್ಮಾಂಡ ಬಿರಿವಂತೆ ॥ ೨೧ ॥
ಸುರಿಸಿದರು ಪೂಮಳೆಯ ಹರಿವಿ- ।
ಷ್ಟರದಿ ಶಚಿ ಸುರನಾಥರಂತೊ- ।
ಪ್ಪಿರುವ ವರದಂಪತಿಗಳಿಗೆ ಪರಿಸಲ್ಕೆ ಸುಮನಸರು ॥
ಹರಿಸಿದರು "ಚಿರಕಾಲ ಸುಖದಿಂ ।
ಪೊರೆಧರೆಯನೆಂದಖಿಲ ಭೂಸುರ ।
ವರರು ತಮ್ಮಯವರದ ವಾಣಿಯೊಳಾ ನರೇಂದ್ರನನು ॥ ೨೨ ॥

ಬಂದ ಮನುಜರಿಗಿಷ್ಟ ಭೋಜನ- |
ದಿಂದಲುಪಚರಿಸುತ ನವಾಂಬರ |
ದಿಂದ ಶೃಂಗರಿಸುತ ದ್ಯುಮತ್ಸಾಧಿಪನು ಪರಿಜನರ ||
ಕುಂದುಗಳ ಪೂರೈಸಿದೊಡೆ, ಸುಖ- |
ದಿಂದಲಾಚಂದ್ರಾರ್ಕವೀ ಭೂ- |
ಸುಂದರಿಯ ಪೊರೆಯೆಂದು ಪರಿಸುತ ಹೊರಟರಾಲಯಕೆ || ೨೩ ||

ಎಂಥ ಸತಿಧರ್ಮಪ್ರಭಾವವಿ- |
ದಂತಕನ ಮನಮೆಚ್ಚಿಸುತ ಕಾ- |
ಲಾಂತರಕೆ ತುತ್ತಾದ ಪತಿಯನ್ನುಳುಹಿ ಭುವನದಲಿ ||
ಸಂತಸದಿ ರಾಜ್ಯೋಪಭೋಗಾ- |
ನಂತ ಸುಖವನು ಪಡೆದಳೈ, ಭೂ |
ಕಾಂತೆಯರ ಪತಿ*ವ್ರತದ ಮಹಿಮೆಯ ನುಸಿರಲೇನೆಂದ || ೨೪ ||

ಧರಣಿಯೊಳಗೀ ಕಥೆಯನತ್ಯಾ |
ದರದಿ ಕೇಳುವ ನರ–ಸುರೋರುಗ- |
ರಿರದೆ ನಿತ್ಯಾನಂದ ಸುಖ–ಸಾಮ್ರಾಜ್ಯವನು ಪಡೆದು ||
ನಿರುತವಿಹ ಪರವೆರಡರೊಳಗು- |
ತ್ಕರುಷದಿಂ ಬಾಳುವರು, ತಿಳಿ ಸಂ |
ಭರಿತದಾಯುರ್ಮಾನದಿಂ, ಪುಸಿಯಾಗದೀ ನುಡಿಯು || ೨೫ ||

ಧನ ಕನಕ ಕಾಮಿನಿ ಸಹೋದರ |
ತನುಜರಾಪೇಕ್ಷೆಯೊಳು ಸದ್ಭಾ |
ವನೆಯೊಳೀ ಕಥೆಕೇಳ್ವರಾ ಮನದಿಷ್ಟವನು ಪೊಂದಿ ||
ಅನುದಿನದೊಳಿಹಲೋಕ ಸುಖಸಾ- |
ಧನದಿ **ಗದುಗಿನ ವೀರನಾರಾ-** |
**ಯಣನ** ಪದಪಂಕೇಜವನು ಕಾಣುವರು ಸಿದ್ಧವಲಾ | || ೨೬ ||

ಈ ತೆರದಿ ವಿಸ್ತರದಿ ಗಿರಿಜಾ ।
ನಾಥನುಸಿರಿದ ಕಥೆಯನಾ ಜಲ- ।
ಜಾತಸಂಭವಸುತನು ಕೇಳ್ದಾನಂದ ಪರವಶದಿ ॥
ಭೂತಪತಿ ಮಾರ್ತಾಂಡತನುಸಂ- ।
ಜಾತನನು ಗೆದ್ದಿವಳ ಕಥೆಯನು ।
ಪ್ರೀತಿಯಿಂಪೇಳ್ದೆನ್ನೊಳೆಂದೆರಗಿದನಃ ಪದಯುಗಕೆ ॥ ೨೬

ಆವಳಿದನಾದರದಿ ಕೇಳುವ ।
ಳಾವಳಿದನಾದರದಿ ಪಾಡುವ ।
ಳಾವಳೀ ಸಾಧ್ವಿಯನು ಪೂಜಿಪಳವಳನವರತ ॥
ಸಾವಧಾನದಿ ಕಾಯ್ವನಾ ಸ- ।
ದ್ಭಾವಿ ಕರುಣಾಕರ ಪರಾತ್ಪರ ।
ದೇವ **ಗದುಗಿನ ವೀರನಾರಾಯಣನು** ಹೊಣೆಯಾಗಿ ॥ ೨೮

ಮಂಗಳಂ ವರ ಸುರಪುರೇಶಗೆ- ।
ಮಂಗಳಂ ದಶರೂಪ ಧಾರಗೆ ।
ಮಂಗಳಂ ಕರಿವರದ ಕರುಣಾಕರ ಸುರೂಪನಿಗೆ ॥
ಮಂಗಳಂ ಸಿರಿಮಾನಗಾಯ್ದಗೆ ।
ಮಂಗಳಂ ನಾಗಾರ್ಜುನಾರಿಗೆ ।
ಮಂಗಳಂ ಜಯ **ವೀರನಾರಾಯಣ** ದಯಾರ್ಣವಗೆ ॥ ·

**ಇಂತು ಏಕಾದಶೋಧ್ಯಾಯ ಪದ ೩೦೩ ಕ್ಕೆ**

## ಕವಿಕಿಂಕರ ತೊರವೆ ರಾಘವಾಂಕ ಕವಿ ವಿರ



